# ಸತೀ ಶಿರೋಮಣಿ

( ಪೌರಾಣಿಕ ಪಂಚಾಂಕ ಗದ್ಯ ನಾಟಕ )


ಲೇಖಕ:

**ಶಂಕರರಾವ ಕುಲಕರಣಿ, ನೂಲವಿ**



ಪ್ರಕಾಶಕ:

**ಗಣೇಶ ಮುರಹರ ಶಿವಪೂಜಿ**

ಮುದ್ರಕ:

**ಖಂಡೋ ರಾಮಚಂದ್ರ ಭಿಸೆ,**

ಕರ್ನಾಟಕ ಪ್ರಿಂಟಿಂಗ ವರ್ಕ್ಸ್

ಧಾರವಾಡ

೧೯೩೧ ]   [ಬೆಲೆ ೦-೬-೦

# ನಾಟ್ಯೋಲ್ಲಿಖಿತ ಪಾತ್ರಗಳು



| | | |
|---|---|---|
| ಆಸ್ತೀಕ | ... | ಮನಸಾದೇವಿಯ ಮಗ |
| ಚಾಂದಸವದಾಗರ | ... | ಚಂಪಕನಗರದ ಅರಸು ಹಾಗು ಪ್ರಸಿದ್ಧ ವರ್ತಕ |
| ಲಕ್ಷ್ಮೀಂದರ | ... | ಚಾಂದಸವದಾಗರನ ಮಗ |
| ದುರ್ಯೋಧನ | ... | ,, ಸೇನಾಪತಿ |
| ನೀಲ | ... | ,, ಸೇವಕ |
| ಧನ್ವಂತರಿ | ... | ,, ಗುರು |
| ಧನೇಶ್ವರ / ಮನೇಶ್ವರ | ... | ಧನ್ವಂತರಿಯ ಶಿಷ್ಯರು |
| ಸಾಯ ಸವದಾಗರ | ... | ನಿಛನಿನಗರದ ಅರಸು ಶ್ರೇಷ್ಠ ವ್ಯಾಪಾರಿ |
| ಚಂದ್ರಕೇತು | ... | ದಕ್ಷಿಣಪಾಟಣಾದ ಅರಸು |
| ಕಾಳು ಸರ್ದಾರ | ... | ಕಮ್ಮಾರ |
| ಮಹಾದೇವ | | |
| ಪಾರ್ವತಿ | | |
| ಮನಸಾದೇವಿ | ... | ಮಹಾದೇವನ ಮಾನಸಪುತ್ರಿ |
| ಸನಕೆ | ... | ಚಾಂದಸವದಾಗರನ ಹೆಂಡತಿ |
| ಅಮಲೆ | ... | ಸಾಯುಸವದಾಗರನ ಹೆಂಡತಿ |
| ಬೇಹುಳೆ | ... | ,, ಮಗಳು |

# ಪ್ರ ಸ್ತಾ ವ ನೆ

ಈ ನಾಟಕವು ನೀತಿಪುರಸ್ಸರವಾದದ್ದು. ಅಲ್ಲಲ್ಲಿಗೆ ತಕ್ಕ ರಸಗಳು ಪ್ರಸಂಗಾನುಸಾರವಾಗಿ ಸೇರಿಸಲ್ಪಟ್ಟಿವೆ. ಶ್ರೇಷ್ಠಗುಣಗಳ ರಕ್ಷಣೆಯಾಗಬೇಕೆಂದೇ ಈ ನಾಟಕವನ್ನು ರಚಿಸಿದ್ದೇವೆ. ಈ ನಾಟಕದೊಳಗಿನ ಪಾತ್ರಗಳಿಂದ ಅನೇಕ ನೀತಿಯ ಮಾತುಗಳನ್ನೂ ವ್ಯವಹಾರಜ್ಞಾನವನ್ನೂ ಸಂಪಾದಿಸಬಹುದಾಗಿದೆ.

ಈಗಿನ ನಾಟಕವೇ ಆಗಲಿ, ಗದ್ಯಪದ್ಯಗಳೇ ಆಗಲಿ, ಶೃಂಗಾರರಸದಿಂದ ತುಂಬಿ ತುಳುಕುತ್ತಿರುವವು. ಆದರೆ ಇದು ಚಾಂದಸವದಾಗರನ ನೈತಿಕ ಧೈರ್ಯದಿಂದಲೂ ಕಾಳುವಿನಂಥ ರಾಜನಿಷ್ಠನ ಭಕ್ತಿಯಿಂದಲೂ ಸತೀ ಸಾಧ್ವಿಯಾದ ಬೇಹುಳೆಯ ಪತಿಭಕ್ತಿಯಿಂದಲೂ ಹೃದಯದ್ರಾವಕವಾಗಿದೆ. ಈಗಿನ ಕಾಲಕ್ಕೆ ಇವೆಲ್ಲ ಗುಣಗಳ ರಕ್ಷಣವು ಭಾವೀ ಜನರಲ್ಲಿ ಆಗಬೇಕಾಗಿದೆ.

ಈಗಿನ ಪ್ರಪಂಚವು ಧರ್ಮವನ್ನು ಮರೆತುಬಿಟ್ಟಿದೆ. ಅಲ್ಪಸ್ವಲ್ಪ ಧರ್ಮಾಚಾರಿಗಳಿದ್ದರೂ ಅವರೂ ಆಡಂಬರಕ್ಕೇ ಮೆಚ್ಚುವವರೂ ಜಾತಿಮತಾಭಿಮಾನಗಳ ಅಹಮಹಮಿಕೆಯುಳ್ಳವರೂ ಆಗಿದ್ದಾರೆ. ಆದರೆ ವಿಶ್ವಕೌಟುಂಬಿಕರ ಅಗಾಧವಾದ ಪ್ರೇಮದ ಮುಂದೆ ಅಲ್ಪ ವಿಚಾರದ ಧರ್ಮಾಚರಣೆಯು ಕೈಯೂರುವದು.

ಈ ನಾಟಕದೊಳಗಿನ ಬ್ರಾಹ್ಮಣನ ಪಾತ್ರದಿಂದ ದೇವರ ಮೇಲಿನ ಶುದ್ಧ ಪ್ರೇಮವನ್ನೂ ನೀತಿಧರ್ಮದ ರಹಸ್ಯವನ್ನೂ ತಿಳಿಯಬಹುದಾಗಿದೆ. ಕಥಾಪ್ರಸಂಗಕ್ಕನುಸರಿಸಿ ವರ್ಣನೆಗಳು ವ್ಯವಹಾರಜ್ಞಾನದ್ಯೋತಕಗಳಾಗಿವೆ. ಓದುಗರು ಇವನ್ನೆಲ್ಲ ಲಕ್ಷಗೊಟ್ಟು ನಿರೀಕ್ಷಿಸಿ ತಕ್ಕ ಗುಣಗಳಿಗೆ ಇಂಬುಗೊಟ್ಟರೆ ಲೇಖಕನ ಹೆಗ್ಗುರಿಯು ಈಡೇರುವದು. ವಿಶ್ವಕೌಟುಂಬಿಕತ್ವವೂ, ನಿಜವಾದ ಧರ್ಮಾಚರಣೆಯೂ, ಪತಿಭಕ್ತಿಯೂ ಈಗಿನ ಕಾಲಕ್ಕೆ ಅವಶ್ಯಕಗಳೆಂಬುದನ್ನು ಓದುಗರು ಲಕ್ಷ್ಯವಿಟ್ಟು ವ್ಯವಹರಿಸಬೇಕಾಗಿ ಪ್ರಾರ್ಥನೆ.

**ಧಾರವಾಡ**
೩೧—೭—೧೯೩೧

**ಬೆಳಗಾವಿ ಗುರುರಾಯರು**

# ಸತೀ ಶಿರೋಮಣಿ

## ಮೊದಲನೆಯ ಅಂಕ

### ಒಂದನೆಯ ಪ್ರವೇಶ

( ಕಾಳಿಮಡುವಿನ ತೀರದಲ್ಲಿಯ ಉಪವನ. ದೊಡ್ಡ ಆಲದಮರವು ತಲೆಯೆತ್ತಿಕೊಂಡಿದೆ. ಇದರ ಶಾಖೋಪಶಾಖೆಗಳಲ್ಲಿ ದೊಡ್ಡ ದೊಡ್ಡ ಹಾವುಗಳು ಅಲಸಭಾವದಿಂದ ಬಿದ್ದುಕೊಂಡಿವೆ. ಭೂಭಾಗವು ಹಸಿರಹುಲ್ಲಿನಿಂದ ಆಚ್ಛಾದಿತವಾಗಿದೆ. ಅಲ್ಲಲ್ಲಿ ನಾನಾವರ್ಣಗಳ ಹಲವು ಆಕಾರಗಳ ರತ್ನಗಳು ಝಗಝಗಿಸುತ್ತಿವೆ. ಸಣ್ಣ-ದೊಡ್ಡ ಸರ್ಪಗಳು ಅತ್ತಿತ್ತ ಹರಿದಾಡುತ್ತಿವೆ. ಆಲದಮರದ ಬೊಡ್ಡಿಯ ಬಳಿಯಲ್ಲಿದ್ದ ಆಸನದ ಮೇಲೆ ಸರ್ಪ–ಕುಲರಾಣಿಯಾದ ಮನಸಾದೇವಿಯು ಅರ್ಧಶಾಯಿತಾವಸ್ಥೆಯಲ್ಲಿ ವಿಶ್ರಮಿಸಿದ್ದಾಳೆ. ನಿದ್ರೆಯು ಇವಳನ್ನು ಆವರಿಸುವುದರಲ್ಲಿದೆ. ಈ ಸಮಯದಲ್ಲಿ ಮನಸಾದೇವಿಯ ಮಗನಾದ ಆಸ್ತೀಕನು ಪ್ರವೇಶಿಸಿದನು.)

**ಆಸ್ತೀಕ**:—ಅವ್ವಾ, ಈ ಅಸಮಯದಲ್ಲಿ ನಿದ್ದೆಮಾಡುತ್ತಿರುವೆಯೇಕೆ? ನಾನು ಬಂದಿರುವೆನು, ಏಳು.

**ಮನಸಾ**:—( ಎದ್ದು ಕುಳಿತು ) ಮಗು, ಹೀಗೆ ಬಾ. ಇಲ್ಲಿ ಕುಳಿತುಕೊಳ್ಳು. ನೀನು ಹೋದ ಸಮಯದಿಂದ ಹಲವು ಬಗೆಗಳಾದ ದುಶ್ಚಿಂತೆಗಳಿಗೊಳಗಾಗಿದ್ದ ನನಗೆ ನಿದ್ದೆಯೆ ಇರಲಿಲ್ಲ. ಕಾರಣ ಇಂದು ಕೂತಲ್ಲಿಯೆ ತೂಕಡಿಸುತ್ತಿದ್ದೆನು. ಇರಲಿ, ನೀನು ಹೋದ ಕೆಲಸವೇನಾಯಿತೆಂಬುವದನ್ನು ಬೇಗ ಹೇಳು. ಕೇಳುವದಕ್ಕೆ ನಾನು ಅತಿಶಯ ಕುತೂಹಲಳಾಗಿದ್ದೇನೆ.

**ಆಸ್ತೀಕ**:—ಚಾಂದ ಸವದಾಗರನು ಪೂಜೆಯನ್ನು ನಡಿಸಿದ್ದುದೇನೊ ನಿಜ. ಆದರೆ......

**ಮನಸಾ**:—ಆದರೆ ಏಕೆ? ಸವದಾಗರನು ಯಾವ ಭಾವನೆಯಿಂದಲೇ ಪೂಜೆಮಾಡಲಿ, ಹೇಗೇ ಪೂಜೆಮಾಡಲಿ, ನಾನು ಸಂತುಷ್ಟಳು. ಮಗು, ಈ ಆನಂದದ ಸುದ್ದಿಯನ್ನು ತಂದುದಕ್ಕಾಗಿ ನಾನು ಸ್ನೇಹಭರದಿಂದ ನಿನ್ನನ್ನು ಅಪ್ಪಿಕೊಳ್ಳುವೆನು. ( ಅಪ್ಪಿಕೊಳ್ಳ ಹೋಗುವಳು. ಆಸ್ತೀಕನು ತಡೆಯುವನು. )

**ಆಸ್ತೀಕ**:—ಅವ್ವಾ, ಹರ್ಷಾತಿರೇಕದಿಂದ ಮೈಮ್ಮರೆಯದಿರು. ನಾನು ಹೇಳುವುದನ್ನು ಚೆನ್ನಾಗಿ ಕೇಳಿಕೊಳ್ಳು. ನಾನು ಹೇಳುವುದರಲ್ಲಿ ನೀನು ಆನಂದಿಸತಕ್ಕ ಒಂದು ಸಂಗತಿಸಹ ಇಲ್ಲ! ಇಷ್ಟೆ ಅಲ್ಲ, ನಾನು ಹೇಳುವ ಎಲ್ಲ ಸಂಗತಿಗಳನ್ನು ನೀನು ಕೇಳಿದೆಯಾದರೆ, ಕ್ರೋಧವಶಳಾಗಿ ಹಲ್ಲಕಡಿಯದಿರಲಾರೆ!

**ಮನಸಾ**:—(ನಿರಾಶಳಾಗಿ) ಚಾಂದ ಸವದಾಗರನು ನನ್ನನ್ನು ಪೂಜಿಸಲಿಲ್ಲವೆ?

**ಆಸ್ತೀಕ**:—ಈ ಸಂಗತಿಯನ್ನು ವಿವರಿಸುವ ಮೊದಲು ನಾನೊಂದು ಮಾತ ಕೇಳಬಯಿಸಿದ್ದೇನೆ. ಅವ್ವಾ, ನೀನು ನನ್ನ ಪ್ರಶ್ನೆಗೆ ಸರಿಯಾಗಿ ಉತ್ತರ ಹೇಳು. ಚಂಡೀದೇವಿಗೂ ನಿನಗೂ ವಿರೋಧವಿದೆಯೆ?

**ಮನಸಾ**:—ಮನು, ನಾನು ನಿನಗೆ ಸಮಯವಿಶೇಷದಲ್ಲಿ ಆ ಪ್ರಾಚೀನ ಸಂಗತಿಯನ್ನು ಅರುಹಬೇಕೆಂದಿದ್ದೆನು. ಈಗ ಆ ಮುನ್ನಿನ ಮಾತೆತ್ತಿ ಉಪಯೋಗವಿಲ್ಲ. ಮೊದಲು ಚಾಂದ ಸವದಾಗರನ ವರ್ತಮಾನವನ್ನು ಹೇಳು. ನಿನ್ನ ಸಂದಿಗ್ಧ ಮಾತು ಕೇಳಿ ನನ್ನ ಕುತೂಹಲತೆ ಹೆಚ್ಚುತ್ತ ನಡೆದಿದೆ.

**ಆಸ್ತೀಕ**:—ಚಾಂದ ಸವದಾಗರನು ನಾನು ಹೋದ ಸಮಯದಲ್ಲಿ ಪೂಜೆಗೆ ತೊಡಗಿದ್ದನು. ಆದರೆ ಅದು ನಿನ್ನ ಪೂಜೆಯಲ್ಲ. ಚಂಪಕನಗರದ ಅರಮನೆಯ ಆವಾರದಲ್ಲಿ ಭವ್ಯವಾದ ಮಂದಿರವಿದೆ. ಆ ಮಂದಿರದಲ್ಲಿ ಪಾರ್ವತೀ-ಪರಮೇಶ್ವರರ ಸ್ವರ್ಣಮಯ ಪ್ರತಿಮೆಗಳು ಸ್ಥಾಪಿಸಲ್ಪಟ್ಟಿವೆ. ಚಾಂದ ಸವದಾಗರನು ಒಳ್ಳೆ ವಿಜೃಂಭಣೆಯಿಂದ ಹರಗೌರಿಯರ ಪೂಜೆಮಾಡುತಲಿದ್ದನು. ಆ ಪೂಜೆಯ ಸೊಬಗನ್ನು ಕಣ್ಣಾರೆಕಾಣುವುದಕ್ಕೆ ಅಸಂಖ್ಯನಾಗರಿಕರು ನೆರೆದಿದ್ದರು. ಶಂಖ, ಜಾಂಗಟೆ, ನಗಾರೆ ಮೊದಲಾದ ಮಂಗಲವಾದ್ಯಗಳ ಭೂರಿಸ್ವರವು ದಿಕ್ತಟವನ್ನು ತುಂಬಿಬಿಟ್ಟಿತ್ತು. ಹಲವು ವಿಧಗಳಾದ ಕುಸುಮಗಳ ಹಾಗೂ ಇತರ ದ್ರವ್ಯಗಳ ಮಿಶ್ರಸುಗಂಧವು ಎಲ್ಲೆಲ್ಲಿಯೂ ಹರಡಿತ್ತು. ದ್ವಿಜವೃಂದವು ಉಚ್ಚಸ್ವರದಿಂದ ಮಂತ್ರಪಠನಮಾಡುತಲಿತ್ತು. ಚಾಂದ ಸವದಾಗರನು ಭಕ್ತಿಭರದಿಂದ ಪೂಜೆಯನ್ನು ನಡಿಸಿದ್ದನು. ನಾನು ಇದೆಲ್ಲವನ್ನೂ ಕಣ್ಮುಟ್ಟಿಕಂಡು ದಂಗುಬಡೆದು ನಿಂತುಬಿಟ್ಟಿದ್ದೆನು.

**ಮನಸಾ**:—ಮುಂದೇನಾಯಿತು?

**ಆಸ್ತೀಕ:**—ಪೂಜೆಯ ತರುವಾಯದಲ್ಲಿ ಸವದಾಗರನು ನೆರೆದ ನಾಗರಿಕರನ್ನುದ್ದೇಶಿಸಿ ಇಂತು ಹೇಳಿದನು. ಹರ-ಪಾರ್ವತಿಯರು ಈ ರಾಜ್ಯದ ಅಧಿದೇವರು. ನಾಗರಿಕರೆಲ್ಲರು ಪಾರ್ವತೀ–ಪರಮೇಶ್ವರರನ್ನೇ ಪೂಜಿಸಬೇಕು. ಉಳಿದ ಯಾವ ದೇವರನ್ನು ಪೂಜಿಸಕೂಡದು. ನನ್ನ ರಾಜ್ಯದಲ್ಲಿ ಅಪದೇವತೆಗಳ ಪೂಜೆಯು ನಿಷಿದ್ಧವಾದದ್ದು. ನಾಗರಿಕರಲ್ಲಿ ಯಾವನೆ ಆಗಲಿ, ಶಿವ-ದುರ್ಗೆಯರ ಹೊತು ಇತರ ಅಪದೇವತೆಗಳ ಪೂಜೆಯನ್ನು ಮಾಡಿದರೆ ದಂಡಾರ್ಹನಾಗುವನು. ಮನಸೆಯು ಅಪದೇವತೆಯೆಂಬುದನ್ನು ನಿಮಗೆ ಬೇರೆಯಾಗಿ ಹೇಳಲಿಕ್ಕೆ ಬೇಡ. ಯಾವ ನಾಗರಿಕನೂ ಯಾವ ಕಾಲಕ್ಕೂ ಮನಸೆಯ ಪೂಜೆಗೆ ಉದ್ಯುಕ್ತನಾಗಕೂಡದು! ಮನಸೆಯ ಪೂಜೆಗೆ ಪ್ರಯುಕ್ತನಾದ ಮನುಷ್ಯನು ಭಯಂಕರ ಶಿಕ್ಷೆಗೆ ಗುರಿಯಾಗದಿರನು!

**ಮನಸಾ:**—ಮಗು, ನೀನು ಸುಮ್ಮನೆ ಇದ್ದೆಯಾ? ಏನೂ ಮಾತಾಡಲಿಲ್ಲವೆ?

**ಆಸ್ತೀಕ:**—ಅವ್ವಾ, ನೀನು ಚಾಂದ ಸವದಾಗರನ ಪೂಜೆಗೆ ಹೀಗೆ ಹಪಾಪಿಸಿದ್ದೇಕೆ? ಅವನೇ ಆಗಲಿ, ಅವನ ಪ್ರಜೆಗಳೆ ಆಗಲಿ ನಿನ್ನ ಪೂಜೆಯನ್ನು ಮಾಡದಿದ್ದರೆ ಆಗುವದೇನು? ಜಗತ್ತಿನಲ್ಲಿ ಇವರನ್ನುಳಿದು ಬೇರೆ ಮಾನವರೆ ಇಲ್ಲವೆ? ಆ ಗರ್ವಿಷ್ಠ ಸವದಾಗರನೊಬ್ಬನು ನಿನ್ನ ಪೂಜೆ ಮಾಡದಿದ್ದರೆ, ಆಗುವ ಹಾನಿಯೇನು?

**ಮನಸಾ:**—ಅವನು ನನ್ನ ಪೂಜೆಯನ್ನು ಮಾಡಲೇ ಬೇಕು? ಯಾಕೆಂದರೆ, ಚಾಂದ ಸವದಾಗರನಿಂದ ನೀನು ಪೂಜೆ ಮಾಡಿಸಿಕೊಂಡರೇನೇ ಜಗದ್ವಂದ್ಯಳಾಗುವೆ, ಜಗತ್ತಿನ ಇತರ ಜನರ ಪೂಜೆಗೆ ಯೋಗ್ಯಳಾಗುವೆ ಎಂದು ಶಿವನು ನನಗೆ ಹೇಳಿದ್ದಾನೆ. ಅಂತೆಯೇ ನಾನು ಚಾಂದ ಸವದಾಗರನಿಂದ ಪೂಜೆಯನ್ನು ಪಡೆಯಲಿಕ್ಕೆ ಉತ್ಸುಕಳಾಗಿದ್ದೇನೆ.

**ಆಸ್ತೀಕ:**—ಅವ್ವಾ, ಏನೇ ಇರಲಿ, ನೀನು ಈ ಹವ್ಯಾಸವನ್ನು ಬಿಟ್ಟುಬಿಡು. ಯಾಕೆಂದರೆ, ಚಾಂದಸವದಾಗರನು ಕಾಲತ್ರಯದಲ್ಲೂ ನಿನ್ನನ್ನು ಪೂಜಿಸನು! ನಾನು ಅವನಿಗೆ ಬಹುಪರಿಯಿಂದ ಹೇಳಿದೆನು. ಆದರೂ ಅವನು ಕೇಳಲಿಲ್ಲ. ಕೊನೆಯಲ್ಲಿ ನಾನು ನನ್ನ ಪೂಜ್ಯಜನನಿಯಾದ ಮನಸಾದೇವಿಯ ಪೂಜೆ

ಯನ್ನು ನೀನು ಮಾಡಿದರೆ, ನಿನ್ನನ್ನು ವಿಶಾಲವಾದ ಸಾಮ್ರಾಜ್ಯದ ಅಧೀಶ್ವರನನ್ನಾಗಿ ಮಾಡುವೆನೆಂದೂ ಹೇಳಿದೆನು.

**ಮನಸಾ:**— ಆದರೂ ಅವನು ಒಪ್ಪಲಿಲ್ಲವೆ? ಅವನು ಏನೇದು ಮಾತಾಡಿದನು?

**ಆಸ್ತೀಕ:**—ಅವ್ವಾ, ಅವನಾಡಿದ ಮಾತುಗಳನ್ನು ನಾನು ನಿನ್ನ ಮುಂದೆ ಉಚ್ಚರಿಸಲಾರದವನಾಗಿರುವೆನು? ಇನ್ನು ಈ ವಿಷಯದಲ್ಲಿ ನೀನು ನನ್ನನ್ನು ಕೇಳಕಬೇಡ!

**ಮನಸಾ:**—ಮಗು, ಅವನು ಅಂದದ್ದಾದರೂ ಏನು? ನೀನದನ್ನು ನನ್ನ ಮುಂದೆ ಹೇಳಲಿಕ್ಕೆ ಬೇಕು.

**ಆಸ್ತೀಕ:**— ಅವ್ವಾ, ನಿನ್ನ ಆಗ್ರಹವೆ ಇರುವುದಾದರೆ ಹೇಳುವೆನು ಕೇಳು. ಅವನು ನಿನ್ನನ್ನು ಬಹಳವಾಗಿ ತಿರಸ್ಕರಿಸಿದನು. ಕೇಳುವುದು ಅಸಹ್ಯವಾಗಿದ್ದರೂ, ನಾನು ಒತ್ತಿಬರುತ್ತಿರುವ ಕೋಪವನ್ನು ತಡೆದು ಹೇಗೊ ಸಹಿಸಿಕೊಂಡೆನು! ಆ ಮದಾಂಧನು ಕೊನೆಯಲ್ಲಿ ನನ್ನ ಹುಟ್ಟುವಿಕೆಯ ಮಾತೆತ್ತಿ ಪರಿಹಾಸಮಾಡಿದನು! ಅವನ ಈ ಪರಿಹಾಸವಚನವು ನನ್ನ ಹೃದಯಕ್ಕೆ ಬಲವಾದ ಆಘಾತವನ್ನು ಮಾಡಿತು? ಬಲಗರ್ವಿತನಾದ ಆ ದುಷ್ಟನು ನಿನ್ನ ತಂದೆಯಾರೆಂದು ನನ್ನನ್ನು ವಿಚಾರಿಸಿದನು. ನನಗೆ ಉತ್ತರಕೊಡಲಿಕ್ಕಾಗಲಿಲ್ಲ. ಆ ಮತ್ತ ಭೂಪತಿಯು ನನ್ನ ಜನನದ ವಿಷಯಕ್ಕೆ ಕಠೋರತಮ ಮಾತಾಡಹತ್ತಿದನು. ನಾನವುಗಳನ್ನು ಕೇಳದಾಗಿ ಹೋದೆನು! ಅವನ ಒಂದೊಂದೇ ಮಾತು ನನ್ನ ಕಿವಿಯಲ್ಲಿ ಸೀಸದಗುಂಡುಗಳನ್ನು ಸುರಿಸಹತ್ತಿತು! ಅವ್ವಾ, ನೀನು ಶಿವನ ಮಾನಸಪುತ್ರಿಯೆಂಬುದನ್ನು ನಾನು ಬಲ್ಲೆನು. ಅಯೋನಿಜಳೆಂಬುದೂ ನನಗೆ ಗೊತ್ತುಂಟು. ನೀನು ಪೂಜ್ಯಳೂ ಪರಮಪವಿತ್ರಳೂ ಎಂಬುದನ್ನೂ ನಾನು ಅರಿತಿರುವೆನು. ಆದರೆ ನಾನು ನನ್ನ ತಂದೆ ಯಾರೆಂಬುದನ್ನು ಅರಿತಿಲ್ಲ! ಆದುದುರಿಂದ ನಾನು ಚಾಂದಸವದಾಗರನ ಬಳಿಯಲ್ಲಿ ತಲೆಬೊಗ್ಗಿಸಬೇಕಾಯಿತು! ಆ ಸೊಕ್ಕಿನ ಅರಸನಿಗೆ ಸರಿಯಾಗಿ ಉತ್ತರ ಕೊಡಲಾರದೆ ಮೌನವನ್ನವಲಂಬಿಸಬೇಕಾಯಿತು! ಅವ್ವಾ, ನಾನಿದುವರೆಗೆ ನನ್ನ ಜನಕನಾರೆಂಬದನ್ನು ಅರಿಯದಿರುವುದು ನಿಜವಾಗಿಯೂ ನಾಚುಗೆಯ ಸಂಗತಿಯಲ್ಲವೆ? ......

**ಮನಸಾ**:—ಮುದ್ದು ಮಗು, ದೈವಹೀನೆಯಾದ ಈ ಮನಸಾದೇವಿಯು ನಿನ್ನ ಹಾಗು ನಿನ್ನ ಹಡೆದವರ ಮೋರೆಗೆ ಮಸಿಹಚ್ಚುವ ಕೆಲಸವನ್ನೆಂದೂ ಮಾಡಿದವಳಲ್ಲ! ಇವಳು ತನ್ನ ಕುಲ-ಶೀಲ-ಧರ್ಮಗಳನ್ನು ಅತಿಕ್ರಮಿಸಿ ಆಚರಿಸಿದವಳಲ್ಲ! ಕಾರಣ ನಿನ್ನ ಜನ್ಮರಹಸ್ಯದಲ್ಲಿ ಲಜ್ಜಾಸ್ಪದ ಸಂಗತಿಯೇನೂ ಇಲ್ಲ; ನಾನಿದುವರೆಗೆ ನಿನ್ನ ಹಡೆದವರ ಹೆಸರನ್ನು ಬುದ್ಧಿಪೂರ್ವಕವಾಗಿ ಬಚ್ಚಿರಿಸಿದ್ದೆನು.

**ಆಸ್ತೀಕ**:—ಕಾರಣವೇನು ?

**ಮನಸಾ**:—ಆ ಕತೆಯು ನಿನಗಾಗಲಿ ನನಗಾಗಲಿ ಸಂತೋಷವನ್ನುಂಟು ಮಾಡತಕ್ಕದ್ದಲ್ಲ. ಅದರಲ್ಲಿ ನನ್ನ ದುರ್ದೈವವು ಮೂರ್ತಿಮಂತಾಗಿ ಪ್ರಕಟವಾಗಿದೆ. ಆ ವಿಷಾದಮಯ ಕಥೆಯನ್ನು ಹೇಳಿ, ಬಾಲನಾದ ನಿನ್ನ ಕೋಮಲ ಮನಸ್ಸನ್ನು ನೋಯಿಸುವ ಇಚ್ಛೆ ನನಗಿರಲಿಲ್ಲ.

**ಆಸ್ತೀಕ**:—ಅವ್ವಾ, ಅದು ಏನೇ ಇರಲಿ, ಇಂದು ನೀನು ಅದನ್ನು ನನಗೆ ಹೇಳಲೇ ಬೇಕು.

**ಮನಸಾ**:—ಇನ್ನು ಮುಚ್ಚಿಡಲಾರದವಳಾಗಿರುವೆನು. ಹೇಳುವೆನು ಕೇಳು. ಮಹಾದೇವನ ಮಾನಸಪುತ್ರಿಯು ನಾನು. ನನ್ನ ಅಪರೂಪರೂಪವನ್ನೂ ಅನುಪಮಲಾವಣ್ಯವನ್ನೂ ನೋಡಿ, ಚಂಡೀದೇವಿಯು ಮತ್ಸರಗ್ರಸ್ತಳಾದಳು. ನನ್ನನ್ನು ಕಾಡಹತ್ತಿದಳು. ಪರಮೇಶ್ವರನು ಪಾರ್ವತಿಯ ಕಾಟದಿಂದ ರಕ್ಷಿಸುವದಕ್ಕಾಗಿ ನನ್ನನ್ನು ತನ್ನ ಕಮಂಡಲದಲ್ಲಿ ಅಡಗಿಸಿಟ್ಟನು. ಗೌರಿಯು ಈ ಸಂಗತಿಯನ್ನರಿದು ಕಮಂಡಲದ ತೂತಿನಲ್ಲಿ ಕಡ್ಡಿಯನ್ನು ಚುಚ್ಚಿ, ನನ್ನ ಕಣ್ಣಿಗೆ ನೋವ ಮಾಡಿದಳು. ಆ ಗಾಯವು ಈಗಲೂ ಇದೆ ನೋಡು.

**ಆಸ್ತೀಕ**:—ಚಾಂದಸವದಾಗರನು ನಿನ್ನನ್ನು ಕುರುಡೆಯೆಂದು ಹೀಯಾಳಿಸಿದ್ದು ಈಗ ನನಗೆ ಚೆನ್ನಾಗಿ ಹೊಳೆಯಿತು.

**ಮನಸಾ**:—ಮಗು, ಮುಂದೆ ಹೇಳುವೆನು ಕೇಳು. ನಾನು ದೊಡ್ಡವಳಾದ ಬಳಿಕ ತಾಪಸಶ್ರೇಷ್ಠರಾದ ಜರತ್ಕಾರು ಮುನಿಗಳನ್ನು ವರಿಸಿದೆನು. ಇವರು "ನನ್ನ ಸುಖಕ್ಕೆ ವ್ಯತ್ಯಯವುಂಟಾಗುತ್ತಲೆ ಮತ್ತೆ ನಾನು ಸಂನ್ಯಾಸವನ್ನು ಗ್ರಹಿ

ಸತಕ್ಕವನು" ಎಂದು ಕರಾರುಮಾಡಿಕೊಂಡು ಪಾಣಿಗ್ರಹಣ ಮಾಡಿದರು. ನಾನು ಮಹಾಮುನಿಗಳ ಸಂತೋಷಸಾಧನೆಗೆ ಎಡಚಾಗದಂತೆ ಎಚ್ಚರದಿಂದಿದ್ದು, ಬಹುದಿನಗಳವರೆಗೆ ಬಾಳುವೆ ಮಾಡಿದೆನು.

**ಆಸ್ತೀಕ** :—ಮುಂದೇನಾಯಿತು ?

**ಮನಸಾ** :—ಒಂದು ದಿನ ಇಳಿಹೊತ್ತಿನಲ್ಲಿ ಇವರು ನನ್ನ ತೊಡೆಯ ಮೇಲೆ ತಮ್ಮ ಮಸ್ತಕವಿರಿಸಿ ಮಲಗಿದ್ದರು. ಕೆಲಹೊತ್ತಿನ ಮೇಲೆ ಸೂರ್ಯನು ಕಾಣದಾದನು. ಕತ್ತಲೆಯು ಒತ್ತಿಬರುವಂತೆ ನನಗೆ ಭಾಸವಾಯಿತು. ನಾನು ಸಾಯಂಕಾಲವಾಯಿತೆಂದು ತಿಳಿದೆನು. ಇವರ ಸಾಯಂಕಾಲದ ಅನುಷ್ಠಾನದ ಸಮಯವು ಅತಿಕ್ರಮಿಸಿ ಹೋಗುವದಲ್ಲ ಎಂದು ಭಯಗೊಂಡೆನು. ಮಲಗಿದ್ದ ಇವರನ್ನು ಎಬ್ಬಿಸಿದರೆ, ನನ್ನ ಸುಖಕ್ಕೆ ವ್ಯಾಘಾತಮಾಡಿದೆಯೆಂದಂದು ಕೋಪಿಸಿ ಹೋಗುವರೆಲ್ಲಿಯೊ ಎಂದು ಚಿಂತಾನ್ವಿತಳಾದೆನು. ಇವರನ್ನು ನಿದ್ರೆಯಿಂದೆಚ್ಚರಿಸುವುದು ಲಗ್ನದ ಸಮಯದ ಕರಾರಿಗೆ ವಿರುದ್ಧವಾಗಿತ್ತು. ನಿದ್ರೆಯಿಂದೆಬ್ಬಿಸದಿರುವುದು ಅಧರ್ಮವಾಗಿತ್ತು. ನಾನು ಕ್ಷಣಕಾಲ ಆಲೋಚಿಸಿ, ಬಳಿಕ ಜಾಗ್ರತಗೊಳಿಸುವುದನ್ನು ನಿರ್ಧರಿಸಿಕೊಂಡೆನು. ಇವರನ್ನು ಕೂಗಿ ಎಬ್ಬಿಸಿದೆನು.

**ಆಸ್ತೀಕ** :—ಇದರಲ್ಲಿ ನಿನ್ನ ದೋಷವೇನು ?

**ಮನಸಾ** :—ಇವರು ಎದ್ದು ನೋಡಿದರು. ನಿಜವಾಗಿಯೂ ಸೂರ್ಯಾಸ್ತವಾಗಿರಲಿಲ್ಲ. ಮೇಘನಿರ್ಮುಕ್ತನಾದ ಹೊಂಬಣ್ಣದ ರವಿಯು ತನ್ನ ಕಡೆಗೆ ನೋಡಿ ಪರಿಹಾಸಮಾಡುತ್ತಿರುವಂತೆ ನನಗೆ ಭಾಸವಾಯಿತು. ನಿಯತಿಯು ನನ್ನ ವಿಷಯದಲ್ಲಿ ವಿಮುಖವಾಗಿ ಈ ಆಟವನ್ನು ಹೂಡಿದೆಯೆಂದು ನಾನು ಭಾವಿಸಿದೆನು. ಅಪರಾಧಿಯು ನ್ಯಾಯಾಧೀಶನ ತೀರ್ಪನ್ನು ಕೇಳಲಾತುರನಾಗಿರುವಂತೆ ನಾನು ಭಯಕಂಪಿತೆಯಾಗಿ ಇವರ ಮೋರೆಯ ನೋಡುತ್ತ ಕುಳಿತಿದ್ದೆನು. ನನ್ನ ವರ್ತನದಿಂದ ಋಷಿಗಳಿಗೆ ಕೋಪವುಂಟಾಯಿತು. ಕ್ರೋಧಾಂಧರಾದ ಅವರು ಎರಡನೆಯ ಯಾವ ವಿಚಾರವನ್ನು ಮಾಡದೆ ವಿವಾಹದ ಸಮಯದ ಕರಾರಿನ ಮೇರೆಗೆ ಹೊರಟುಬಿಟ್ಟರು. ನಾನು ಅಳಹತ್ತಿದೆನು. ಮುಂದೆ ನನ್ನ ಗತಿಯೇನೆಂದು ಅಂಗಲಾಚಿ ಬೇಡಿಕೊಂಡೆನು. ಆಶ್ರಮದ ಪಶುಪಕ್ಷಿಗಳು ಸಹಾನುಭೂತಿಯಿಂದ ಕಣ್ಣೀರಸುರಿಸಹತ್ತಿದವು. ಹಾವುಗಳು ಮಹಾಮುನಿಗಳ ಪಾದಗಳನ್ನು ಹಿಡಿದು

ಕೊಂಡವು. ಆದರೂ ಇವರಿಗೆ ನನ್ನ ವಿಷಯದಲ್ಲಿ ದಯೆಯುಂಟಾಗಲಿಲ್ಲ. ಕುಟಿಲ ಸ್ವಭಾವದ ಹಾಗು ವಕ್ರಗತಿಯ ಈ ಹಾವುಗಳೇ ನಿನ್ನನ್ನು ಗತಿಗಾಣಿಸುವವು ಎಂದು ನುಡಿದು ರಭಸದಿಂದ ಹೋಗಿಬಿಟ್ಟರು. ನಾನು ಮೂರ್ಛಿತಳಾಗಿ ಬಿದ್ದು ಬಿಟ್ಟೆನು.

**ಆಸ್ತೀಕ**:—ಅವ್ವಾ, ಎಂತಹ ಅನ್ಯಾಯವಿದು!

**ಮನಸಾ**:—ಮಗು, ನ್ಯಾಯಾನ್ಯಾಯಗಳನ್ನು ವಿಚಾರಿಸುವರಾರು? ಅಪ್ರಸನ್ನವಾದ ದೈವವು ನನ್ನನ್ನು ಪತಿಸಾನ್ನಿಧ್ಯದಿಂದ ಹೊಡೆದಟ್ಟುವ ಕಾರ್ಯಕ್ಕೆ ಹೊಂಚುಹಾಕಿಕೊಂಡಿತ್ತು. ಕೃತಕಾರ್ಯವಾಗಿ ನನ್ನನ್ನು ಈ ದಶೆಗೆ ಗುರಿಮಾಡಿತು. ಕ್ಷಣ ಕಾಲದ ತರುವಾಯ ನಾನು ಮೂರ್ಛೆಯಿಂದೆಚ್ಚತ್ತು ನೋಡಿದೆನು. ಶೂನ್ಯಪ್ರಾಯವಾದ ಆ ಆಶ್ರಮದಲ್ಲಿ ಇರಲಾರದವಳಾಗಿ ಇಲ್ಲಿಗೆ ಬಂದೆನು. ಆಗ ನಾನು ಬಸಿರಿದ್ದೆನು. ನೀನು ನನ್ನ ಹೊಟ್ಟೆಯಲ್ಲಿದ್ದೆ. ಈ ವರೆಗೂ ನಾನು ಇವರ ಸಮಾಗಮವನ್ನು ಹೊಂದಿದವಳಲ್ಲ. ಎಲ್ಲಿರುವರೆಂಬದನ್ನು ಅರಿದವಳಲ್ಲ. ಅಂದ ಬಳಿಕ ನಿನಗೆ ಇವರ ದರ್ಶನವು ಹೇಗಾಗಬೇಕು?

**ಆಸ್ತೀಕ**:—ಅವ್ವಾ, ನೀನು ನಿಷ್ಕಂಲಕಚರಿತ್ರಳೆಂಬುದರಲ್ಲಿ ತಿಲಪ್ರಾಯವೂ ಸಂದೇಹವಿಲ್ಲ. ಇಂತಹ ನಿನ್ನನ್ನು ಚಾಂದಸವದಾಗರನು ಬಗೆಬಗೆಯ ಕಟುಮಾತುಗಳಿಂದ ತಿರಸ್ಕರಿಸಬೇಕೆ? ಲಕ್ಷ್ಮಿಯ ಬಲದಿಂದಲೂ ಅಧಿಕಾರದ ಹೆಮ್ಮೆಯಿಂದಲೂ ಮದಾಂಧನಾಗಿದ್ದ ಅವನ ಪಾರುಪತ್ಯವನ್ನು ಚನ್ನಾಗಿ ಮಾಡಲಿಕ್ಕೇಬೇಕು. (ಹಲ್ಲುಕಡಿಯುವನು)

**ಮನಸಾ**:—ಮಗು, ನನ್ನ ದುರ್ಭಾಗ್ಯದ ದುರ್ಲೀಲೆಯನ್ನು ನೋಡು. ನಾನು ಸಾಂಬನ ಮಾನಸಪುತ್ರಿಯಾಗಿಯೂ ದೇವತೆಗಳಲ್ಲಿ ಸೇರ್ಪಡೆಯಾಗಲಿಲ್ಲ— ಭೂಲೋಕದ ಮಾನವರಿಂದ ಪೂಜೆಯನ್ನು ಪಡೆಯಲಿಲ್ಲ. ಮಾನವಿಯಾಗಿ ಪ್ರಾಪಂಚಿಕಸುಖವನ್ನು ಅನುಭವಿಸಲಿಲ್ಲ. ಈ ಸರ್ಪಗಳ ರಾಜ್ಯದಲ್ಲಿ ಪತಿವಿರಹದಿಂದ ಜೀವಿಸಬೇಕಾಗಿದೆ. ಈ ಇರವು ನನಗೆ ಅಸಹ್ಯವಾಗಿದೆ. ಇನ್ನು ನಾನು ಇದರ ಪ್ರತೀಕಾರಕ್ಕೆ ತೊಡಗುವೆನು.

**ಆಸ್ತೀಕ**:—ಅವ್ವಾ, ನೀನು ಏನು ಮಾಡಬೇಕೆಂದಿರುವೆ?

**ಮನಸಾ**:—ಇನ್ನು ನನಗೆ ಸಾಂಸಾರಿಕ ಸುಖವು ಬೇಕಿಲ್ಲ. ಪತಿಸಮಾಗಮದ ಆಶೆ ನನಗಿಲ್ಲ. ಶಂಕರನ ಮಾನಸಪುತ್ರಿಯಾಗಿದ್ದ ನಾನು ಶ್ರೇಷ್ಠತಮ ದೇವತೆಗಳಲ್ಲಿ ಗಣನೆಹೊಂದಿ ಜಗತ್ಪೂಜ್ಯಳಾಗಬೇಕೆಂದಿರುವೆನು.

**ಆಸ್ತೀಕ**:—ಇದಕ್ಕಾಗಿ ನೀನು ಮೊದಲು ಚಾಂದಸವದಾಗರನ ಪೂಜೆಯನ್ನು ಹೊಂದಲಿಕ್ಕೆ ಬೇಕಷ್ಟೆ ! ಆದರೆ ಅವನು ನಿನ್ನ ಪೂಜೆಗೆ ಸಿದ್ಧನಾಗುವ ಸಂಭವಿಲ್ಲ. ಅಂದಬಳಿಕ ನೀನು ಜಗದ್ವಂದ್ಯಳಾಗುವ ಬಗೆ ಹೇಗೆ ?

**ಮನಸಾ**:—ಇನ್ನು ನಾನು ಇದನ್ನೆ ಪರೀಕ್ಷಿಸಬೇಕೆನ್ನುವೆನು. ನನ್ನ ಯಾವಚ್ಛಕ್ತಿಯನ್ನು ಪ್ರಯೋಗಿಸಿ ಚಾಂದಸವದಾಗರನ ಗರ್ವವನ್ನು ತಗ್ಗಿಸುವೆನು. ಅವನು ತಾನೇ ತಾನಾಗಿ ನನ್ನ ಪೂಜೆಗೆ ಪ್ರಯುಕ್ತನಾಗುವಂತೆ ಮಾಡುವೆನು. ಸಾಮಾನ್ಯ ಮಾನವನವನು. ದಿವ್ಯಶಕ್ತಿಯುಕ್ತಳಾದ ನನ್ನ ಬಳಿಯಲ್ಲಿ ಅವನ ಹುಡುಗಾಟ ನಡೆಯದು. ಅಲ್ಪಾವಧಿಯಲ್ಲಿಯೆ ಅವನನ್ನು ಹಣ್ಣಿಗೆತಂದು, ಅವನು ನನಗೆ ಶರಣಾಗತನಾಗುವಂತೆ ಮಾಡುವೆನು.

**ಆಸ್ತೀಕ**:—ಅವ್ವಾ, ನಾನು ನಿನ್ನ ಈ ಕೆಲಸಕ್ಕೆ ನೆರವಾಗಬೇಕೆಂದಿದ್ದೇನೆ. ಚಾಂದಸವದಾಗರನು ಸರ್ಪಗಳನ್ನೆಲ್ಲ ಸಂಹರಿಸುವ ಸಂಕಲ್ಪಮಾಡಿದ್ದಾನೆ. ಸರ್ಪಗಳ ಮೇಲೆ ದಂಡೆತ್ತಿ ಹೊರಡಲಿಕ್ಕೆ ತನ್ನ ಸೇನಾಪತಿಗೆ ಅಪ್ಪಣೆ ಮಾಡಿದ್ದಾನೆ. ಸೇನಾಪತಿಯು ಸಹಾಯಕ್ಕೋಸುಗ ತಾನೂ ಹೊರಡತಕ್ಕವನಿದ್ದಾನೆ. ಇನ್ನು ಅಲ್ಪಾವಧಿಯಲ್ಲಿ ಅವನು ಸರ್ಪಕುಲ ನಿರ್ಮೂಲನಕ್ಕಾಗಿ ಸೈನ್ಯ ಸಮೇತನಾಗಿ ಇಲ್ಲಿಗೆ ಬರಬಹುದಾಗಿದೆ. ನಾನು ಅವನನ್ನು ಎದುರಿಸಬೇಕೆಂದಿರುವೆನು. ಸರ್ಪಗಳ ಸಹಾಯದಿಂದ ಅವನನ್ನೂ ಅವನ ಸೈನಿಕರನ್ನೂ ನಿರ್ನಾಮ ಮಾಡಬೇಕೆಂದಿರುವೆನು. ನೀನು ನನಗೆ ಅಪ್ಪಣೆಯನ್ನು ದಯಪಾಲಿಸು. ನನ್ನನ್ನು ಸಂತೋಷದಿಂದ ಯುದ್ಧಕ್ಕೆ ಕಳುಹಿಕೊಟ್ಟು ನನ್ನ ಯುದ್ಧಕುಶಲತೆಯನ್ನು ನೋಡು. ಚಾಂದಸವದಾಗರನು ಯುದ್ಧ ಮಾಡಲಾರದೆ ಪರಾಜಯವನ್ನೊಪ್ಪಿಕೊಂಡು ನಿನಗೆ ಶರಣಾಗತನಾಗಬೇಕು. ಇಲ್ಲವೆ ಯುದ್ಧಭೂಮಿಯಲ್ಲಿ ಮಡಿಯಬೇಕು. ಆ ವರೆಗೆ ನಾನು ಶಸ್ತ್ರವನ್ನು ಕೆಳಗಿರಿಸೆನು.

**ಮನಸಾ**:—ಮಗು, ನೀನವನೊಡನೆ ಯುದ್ಧಮಾಡಲಾರೆ. ಸರ್ಪಗಳ ಸಹಾಯದಿಂಪ ಅವನನ್ನು ಸೋಲಿಸಲಾರೆ.

**ಆಸ್ತೀಕ** :—ಯಾಕೆ ?

**ಮನಸಾ** —ಅವನಲ್ಲಿ ಮಹಾ ಜ್ಞಾನವಿದೆ.

**ಆಸ್ತೀಕ** :—ಮಹಾ ಜ್ಞಾನವೆಂಬುದು ಅಸ್ತ್ರವೆ ? ಶಸ್ತ್ರವೆ ?

**ಮನಸಾ** :—ಶಸ್ತ್ರವೂ ಅಲ್ಲ. ಅಸ್ತ್ರವೂ ಅಲ್ಲ. ಅದೊಂದು ರತ್ನ. ಮಹಾದೇವನ ತಲೆಯ ಮೇಲಿದ್ದ ಉದಯಕಾಲ ಸರ್ಪದ ಹೆಡೆಯಲ್ಲಿಯ ಅದ್ವಿತೀಯ ಮಣಿಯು. ಚಾಂದಸವದಾಗರನು ಉಗ್ರವಾದ ತಪಸ್ಸನ್ನು ಮಾಡಿ, ಸಾಂಬನನ್ನು ಪ್ರಸನ್ನ ಮಾಡಿಕೊಂಡು ಆ ಮಹಾಮಣಿಯನ್ನು ಪಡೆದಿದ್ದಾನೆ. ಸರ್ಪದಂಶನದಿಂದ ಮೃತನಾದ ಮನುಷ್ಯನು ಆ ಮಹಾಮಣಿಯ ಸ್ಪರ್ಶಮಾತ್ರದಿಂದ ಮತ್ತೆ ಜೀವಿಸುವನು. ಹೀಗಿರಲು ಅವನು ನಿನ್ನ ಈ ಸರ್ಪಸೈನ್ಯಕ್ಕೆ ಬೆದರಬಹುದೆ ?

**ಆಸ್ತೀಕ** :—ಅವ್ವಾ, ಹೀಗಿದ್ದರೆ ನಾನೇನು ಮಾಡಲಿ ?

**ಮನಸಾ** :—( ಕ್ಷಣ ಕಾಲ ಯೋಚಿಸಿ ) ಮಗು, ನೀನು ಯುದ್ಧಮಾಡುವದು ಬೇಡ. ನಾಗಸೈನ್ಯವನ್ನೆಲ್ಲ ಕಟ್ಟಿಕೊಂಡು ಕಾಲೀಮಡುವಿನ ತಳದಲ್ಲಿ ಅಡಗಿರು. ನೀನು ಚಾಂದಸವದಾಗರನ ಕಣ್ಣಿಗೆ ಬೀಳಬೇಡ.

**ಆಸ್ತೀಕ** :—ಇಂತಹ ಹೇಡಿ ಕೆಲಸವು ನನ್ನಿಂದಾಗದು ! ಏನೇ ಆಗಲಿ, ನಾನು ಯುದ್ಧಮಾಡುವೆನು.

**ಮನಸಾ** :—ಬೇಡ. ಸವದಾಗರನ ಮಹಾ ಜ್ಞಾನವು ನನ್ನ ಕೈಸೇರುವವರೆಗೆ ಅವನು ಹಣ್ಣಿಗೆ ಬರಲಾರನು. ನೀನು ಹಟದಿಂದ ಅವನನ್ನೆದುರಿಸಿದರೆ ಸರ್ಪಕುಲಕ್ಷಯವಾಗಿ ಹೋಗುವದು. ನಿನ್ನ ಈ ಏರಾಟದಿಂದ ಅವನಿಗೆ ಯಾವ ತರದ ಹಾನಿಯೂ ಆಗದು.

**ಆಸ್ತೀಕ** :—ನನಗೆ ಮಹಾಜ್ಞಾನವು ಬೇಕು. ನಾನು ಚಾಂದಸವದಾಗರನ ಸಂಗಡ ಶೌರ್ಯದಿಂದ ಕಾದಿ ಆ ಮಹಾಮಣಿಯನ್ನು ದೊರಕಿಸುವೆನು.

ನೇಪಥ್ಯದಲ್ಲಿ ರಣವಾದ್ಯಗಳು ಮೊಳಗುವವು

**ಆಸ್ತೀಕ** :—ಅವ್ವಾ, ಚಾಂದಸವದಾಗರನ ಸೈನ್ಯವು ಯುದ್ಧೋತ್ಸಾಹದಿಂದ ಬರುತ್ತಿರುವಂತೆ ಕಾಣುತ್ತಿದೆ. ನಾನೂ ಯುದ್ಧಕ್ಕೆ ಸಿದ್ಧನಾಗುವೆನು.

**ಮನಸಾ** :—ವತ್ಸ, ಹೀಗೆ ಹಟಮಾಡದಿರು. ನನ್ನ ಮಾತನ್ನು ಕೇಳು. ನಾನು ಹೇಳಿದಂತೆ ವರ್ತಿಸು. ನಾನು ನಿನ್ನ ಜನನಿಯಲ್ಲವೆ? ಮಾತೆಯ ಮಾತನ್ನು ನಡಿಸುವದು ಸುತನ ಧರ್ಮವಲ್ಲವೆ?

**ಆಸ್ತೀಕ** :—ಅವ್ವಾ, ನನಗೆ ಆ ಮಹಾಮಣಿಯು ಬೇಕೇಬೇಕು. ಚಾಂದ ಸವದಾಗರನ ಸಂಗಡ ಯುದ್ಧಹೂಡದ ಹೊರತು ನನಗೆ ಆ ರತ್ನವು ಹೇಗೆ ದೊರೆಯಬೇಕು?

**ಮನಸಾ** :—ಮಗು, ನೀನು ಕಾಳಗಕ್ಕೆ ಅಣಿಯಾಗುವುದು ಬೇಡ. ನಾನು ನಿನಗೆ ಆ ರತ್ನವನ್ನು ತಂದುಕೊಡುವೆನು. ನೀನು ನಿಶ್ಚಿಂತನಾಗಿ ಕಾಲೀ ಮಡುವಿನಲ್ಲಿ ಅಡಗಿರು. ಈ ಸರ್ಪಗಳನ್ನೆಲ್ಲ ಕರೆದುಕೊಂಡು ಹೊರಡು.

ಆಸ್ತೀಕನು ಅನುಮಾನಿಸಹತ್ತಿದನು. ರಣವಾದ್ಯಗಳ ಸಪ್ಪಳವು ಮತ್ತೆ ಕೇಳ ಬರಹತ್ತಿತು.

**ಮನಸಾ** :—ಪ್ರಿಯ ವತ್ಸ, ಹೀಗೆ ಅನುಮಾನುಗೊಳ್ಳದಿರು. ಜನನಿಯ ಆಜ್ಞಾಪಾಲನೆಗೆ ಸಿದ್ಧನಾಗು. ಇಲ್ಲಿ ನೋಡು, ರಣವಾದ್ಯಗಳ ಸಪ್ಪಳವನ್ನು ಕೇಳಿ ಸರ್ಪಗಳು ಹೆಡೆದೆಗೆದು ಭೋರ್ಗರೆಯುಹತ್ತಿವೆ. ಇನ್ನು ಕಾಲವಿಲಂಬ ಮಾಡಿದರೆ ಇವುಗಳನ್ನು ಶಾಂತಗೊಳಿಸಲಿಕ್ಕೆ ಕಠಿನವಾದೀತು.

**ಆಸ್ತೀಕ** :—ಅವ್ವಾ, ಅಲ್ಲಿ ನೋಡು. ಸೌದಾಗರನ ಸೈನ್ಯವು ಬರುತ್ತಿದೆ. ಆ ಸೈನಿಕರ ಮಧ್ಯದಲ್ಲಿ ಚಾಂದಸವದಾಗರನು ಒಡೆದು ಕಾಣುತ್ತಿದ್ದಾನೆ. ಅದೊ ನೋಡು. ಅವನ ಮುಕುಟದಲ್ಲಿಯ ಮಹಾಮಣಿಯು ಝಗಝಗಿಸುತ್ತಿದೆ.

**ಮನಸಾ** :—ಮಗು, ಇನ್ನು ಮಾತಾಡುತ್ತ ಕುಳ್ಳಿರಬೇಡ. ಏಳು. ಹೊರಡು. ನಾವು ಮುಂದಿನ ಎತ್ತುಗಡೆಯನ್ನು ಮಾಡಬೇಕಿದೆ, ಹತಭಾಗಿನಿಯಾದ ನಿನ್ನ ಈ ಜನನಿಯ ಅಪ್ಪಣೆಯನ್ನು ನೀನು ಕಾಲವಿಲಂಬ ಮಾಡದೆ ಪಾಲಿಸಲಿಕ್ಕೆಬೇಕು. ( ಆಸ್ತೀಕನ ಕೈಹಿಡಿದೆಳೆದು ಕಳುಹಿಕೊಟ್ಟಳು. ಆಸ್ತೀಕನು ಮೋರೆಯನ್ನು ಕೆಳಗೆಮಾಡಿಕೊಂಡು ಹೊರಟುಹೋದನು. )

**ಮನಸಾ** :—(ಆತಗತಂ) ಹೇಗಾದರೂ ಮಾಡಿ ಸವದಾಗರನ ಮಹಾಮಣಿಯನ್ನು ಅಪಹರಿಸಲಿಕ್ಕೆಬೇಕು. ಸರಳ ಮಾರ್ಗದಿಂದ ಹೋದರೆ, ಈ ಕೆಲಸದಲ್ಲಿ ನನಗೆ ಯಶಸ್ಸು ಸಿಗದು. ನಾನು ನನ್ನ ದಿವ್ಯಶಕ್ತಿಯ ಉಪಯೋಗಮಾಡಿ

ಕೊಳ್ಳಲಿಬೇಕು. ಕಪಟತನದಿಂದ ವರ್ತಿಸಿ ಸವದಾಗರನ ಮಹಾಮಣಿಯನ್ನು ಎತ್ತಿಹಾಕಬೇಕು. ( ಪ್ರಕಾಶ ರೀತಿಯಿಂದ ) ಪ್ರಕಾಶವೆಲ್ಲವೂ ಅಡಗಿಹೋಗಲಿ, ದಶದಿಕ್ಕುಗಳನ್ನು ಕತ್ತಲೆಯು ವ್ಯಾಪಿಸಲಿ.

( ಮನಸಾದೇವಿಯ ಇಂಗಿತದಂತೆ ಕಾಲೀದಹದಲ್ಲೂ ಸುತ್ತಲಿನ ವನಪ್ರದೇಶದಲ್ಲೂ ಕತ್ತಲು ಕವಿದಿತು. ದೂರದಲ್ಲಿ ನಡೆದಿದ್ದ ಹರಹರಮಹಾದೇವ ಹರಹರಮಹಾದೇವ ಎಂಬ ಜಯಧ್ವನಿಯು ಕೇಳಬರುತ್ತಲಿತ್ತು. ಅಲ್ಪಾವಕಾಶದಲ್ಲಿ ಮತ್ತೆ ಆ ಪ್ರದೇಶವು ಪ್ರಕಾಶಮಾನವಾಯಿತು. ನವತರುಣಿಯೂ ಅದ್ವಿತೀಯ ರೂಪಸಂಪನ್ನೆಯೂ ಅನುಪಮಲಾವಣ್ಯಮಯಿಯೂ ಆಗಿದ್ದ ರಮಣಿಯು ವಟವೃಕ್ಷಕ್ಕೆ ಬಂಧಿಸಲ್ಪಟ್ಟಿದ್ದಳು. ಆಲದಮರದ ರೆಂಬೆಯಲ್ಲಿದ್ದ ಅಜಗರಸರ್ಪವು ಈ ಯುವತಿಯನ್ನು ಕಚ್ಚಲಿಕ್ಕೆಂದು ಮುಂದುವರೆಯುವದರಲ್ಲಿತ್ತು. ಕಬ್ಬಿಣದ ದೊಡ್ಡ ಸರಪಳಿಯಿಂದ ಕಟ್ಟಲ್ಪಟ್ಟಿದ್ದ ತರುಣಿಯು ಈ ಮಹಾಸರ್ಪದ ದಂಶನದಿಂದ ಪಾರಾಗಲಿಕ್ಕೆ ನಿಷ್ಫಲ ಪ್ರಯತ್ನಮಾಡುತ್ತಿದ್ದಳು. ಅತ್ಯಂತ ಭಯಾಕುಲೆಯಾಗಿ ನನ್ನನ್ನು ರಕ್ಷಿಸಿರಿ ಎಂದು ಆರ್ತಸ್ವರಮಾಡುತ್ತಿದ್ದಳು. ಈ ಸಮಯದಲ್ಲಿ ಚಾಂದಸವದಾಗರನು ಬಂದನು. ಸುಂದರಿಯು ಇವನನ್ನು ದೀನಮುದ್ರೆಯಿಂದ ನೋಡಿ, ಹೇಗಾದರೂ ಮಾಡಿ ನನ್ನನ್ನು ಪಾರುಮಾಡಿರಿ, ಈ ಸಂಕಟದಿಂದ ಉಳಿಸಿರಿ ಎಂದು ಅಲ್ಪರೆದಳು. ಚಾಂದಸವದಾಗರನು ಅಪ್ರತಿಭನಾಗಿ ಕ್ಷಣಕಾಲ ಸುಮ್ಮನಿದ್ದು ನೋಡಿದನು. ಬಳಿಕ ' ಸುಂದರಿ ಹೆದರದಿರು, ನಾನು ನಿನ್ನನ್ನು ನಿಶ್ಚಯವಾಗಿಯೂ ರಕ್ಷಿಸುವೆನು' ಎಂದು ನುಡಿದು ಅವಳ ಬಳಿಗೆ ಹೋದನು. ಮಹಾಸರ್ಪವು ಚಾಂದಸವದಾಗರನ ಕಡೆಗೆ ಧಾವಿಸಿಬರಹತ್ತಿತು.)

**ತರುಣಿ** :—ಆರ್ತರಕ್ಷಕರೆ, ತಲೆಯನ್ನು ತಗ್ಗಿಸಿರಿ! ದೀನಬಂಧುಗಳೆ, ಶಿರವನ್ನು ಬೊಗ್ಗಿಸಿರಿ! ಅಜಗರವು ನಿಮ್ಮ ತಲೆಯ ಮೇಲೆ ಬೀಳುವುದರಲ್ಲಿದೆ!

**ಚಾಂದ** :—( ಕೊಂಚವೂ ವಿಚಲಿತನಾಗದೆ ) ನನ್ನ ತಲೆಯ ಮೇಲೆ ಹಾವಿದೆಯೆ? ಇರಲಿ, ನಾನದಕ್ಕೆ ಭಯಗೊಳ್ಳುವುದಿಲ್ಲ. ಅದು ನನ್ನನ್ನು ಕಚ್ಚುವದೆ? ಕಚ್ಚಲಿ, ನಾನು ಬೇಡವೆನ್ನುವದಿಲ್ಲ. ಎಂತಹ ಸರ್ಪವೆ ಇರಲಿ, ಅದು ನನಗೆ ಬೆದರಬೇಕಲ್ಲದೆ, ನಾನು ಅದಕ್ಕೆ ಬೆದರುವವನಲ್ಲ. ಅದು ನನ್ನನ್ನೇನು ಮಾಡುವದು? ಕಚ್ಚಿ ನಿಷ್ಫಲಮನೋರಥವಾಗಿ ಕೊನೆಗೆ ನನ್ನ ಪಾದಗಳನ್ನು ಹಿಡಿದು

ಕೊಂಡು ತನ್ನ ದೀನತೆಯನ್ನು ಪ್ರಕಟಿಸಲಿಕ್ಕೆಬೇಕು! ಅದಿರಲಿ, ಸುಂದರಿ ನೀನಾರು? ಏಕೆ ಇಲ್ಲಿಗೆ ಬಂದಿರುವೆ? ಆವ ದುರಾತ್ಮನು ಕೋಮಲೆಯಾದ ನಿನ್ನನ್ನು ಇಂತಹ ದುಃಖಕ್ಕೆ ಗುರಿಮಾಡಿದನು? ಅವನಾವನೇ ಇರಲಿ, ನಾನಾ ಅಧಮನನ್ನು ಶಿಕ್ಷಿಸದೆ ಬಿಡೆನು!

**ತರುಣಿ**:—ಅಪ್ಪಯ್ಯಾ ಅಜಗರವು ತೀರ ಸನಿಯಕ್ಕೆ ಬಂತು!...... ಅಯ್ಯೊ, ಕಚ್ಚಿಬಿಟ್ಟಿತಲ್ಲ! ವೀರಪುರುಷರೆ, ಇನ್ನು ನನ್ನ–ನಿಮ್ಮ ಗತಿಯೇನು?

**ಚಾಂದ**:—ಮನೋಹರೆ, ನೀನು ಆ ಕಡೆಗೆ ನೋಡದಿರು! ಸರ್ಪವು ಬೇಕಾದಷ್ಟು ಸಲ ನನ್ನನ್ನು ಕಚ್ಚಲಿ! ಅದರಿಂದ ನನಗೆ ಎಳ್ಳಷ್ಟು ಸಹ ಅಪಾಯ ವಾಗದು! ( ಬಂಧನವನ್ನು ಬಿಡಿಸಹತ್ತುವನು. )

**ತರುಣಿ**:—(ತನ್ನ ಕಡೆಗೆ ಬರುತ್ತಿರುವ ಹಾವನ್ನು ನೋಡಿ) ಅಮ್ಮಯ್ಯಾ, ಸರ್ಪವು ನನ್ನ ಕಡೆಗೆ ಬರುತ್ತಿದೆಯಲ್ಲ! ಬಂದೇಬಿಟ್ಟಿತು! ಅಯ್ಯೊ, ನಾನು ಸತ್ತೆನು!! ಸತ್ತೆನು!!!

**ಚಾಂದ**:—ಮನಮೋಹನೆ, ಸರ್ಪದಂಶಕ್ಕಾಗಿ ಹೀಗೆ ಭಯಗೊಂಡಿರು ವೆಯಲ್ಲವೆ? ನಾನಾರೆಂಬುದನ್ನು ನೀನರಿಯೆ! ಅಂತೆಯೆ ನೀನು ಹೀಗೆ ಹಾವಿಗೆ ಅತಿಶಯ ಹೆದರಿರುವೆ! ನಾನು ನಿನ್ನ ಬಳಿಯಲ್ಲಿರುವ ವರೆಗೆ ನೀವು ಯಾವುದಕ್ಕೂ ಅಂಜುವ ಕಾರಣವಿಲ್ಲ! ಉಂಟಾಗಿದ್ದ ಭಯವನ್ನು ದೂರೀಕರಿಸಿಕೊಂಡು ನನ್ನೊ ಡನೆ ಚನ್ನಾಗಿ ಮಾತಾಡು. ಯಾಕೆಂದರೆ, ನಾನಾರೆಂಬುದನ್ನು ಹೇಳುವ ಮೊದಲು ನೀನಾರೆಂಬುದನ್ನು ಕೇಳಿಕೊಳ್ಳುವ ಮನಸ್ಸು ನನಗಾಗಿದೆ. ಮೋಹನಾಂಗಿ, ನಿನ್ನ ಕಣ್ಣುಗಳ ತೇಜವನ್ನೂ ಮುಖದ ಲಾವಣ್ಯವನ್ನೂ, ಅವಯವಗಳ ಸೌಷ್ಟವ ವನ್ನೂ ನೋಡಿ ಮುಗ್ಧನಾದ ನನಗೆ ನೀನು ಮಾನವಿಯಾಗಿರದೆ ದೇವತೆಯಾಗಿರ ಬೇಕೆಂದು ಭಾಸವಾಗುತ್ತಿದೆ.......

**ಮನಸಾ**:—ಮಹನೀಯರೆ, ಇನ್ನು ನೀವು ಇಲ್ಲಿರುವುದು ಹಿತಕರವಲ್ಲ. ಬೇಗನೆ ಓಡಿಹೋಗಿರಿ! ಪ್ರಾಣವನ್ನುಳಿಸಿಕೊಳ್ಳಿರಿ! ಯಃಕಶ್ಚಿತ ಅಬಲೆಯಾಗಿದ್ದ ನನ್ನ ಜೀವಕ್ಕಿಂತ ಶೂರಪುರುಷರಾಗಿದ್ದ ನಿಮ್ಮ ಜೀವವು ಸಾವಿರಾರುಪಟ್ಟನಿಂದ ಮೇಲಾದ್ದು. ಕಾರಣ ನೀವೀಗ ನನ್ನ ರಕ್ಷಣೆಗೋಸುಗ ನಿಂತು ನಿಮ್ಮ ಪ್ರಾಣವನ್ನು ಕಳೆದುಕೊಳ್ಳುವುದಕ್ಕಿಂತ ಓಡಿಹೋಗಿ ಆತ್ಮರಕ್ಷಣೆಮಾಡಿಕೊಳುವದು ಹಿತಕರ

ವಾದ್ದು. ಅಲ್ಲಿ ನೋಡಿರಿ. ಆ ಭಯಂಕರ ಸರ್ಪವು ನಿಮ್ಮ ಹಣೆಗೆ ತಾಗುವುದ ರಲ್ಲಿದೆ. ದಂಶನಮಾಡುವುದರಲ್ಲಿದೆ. ಅದು ದಂಶನಮಾಡಿತೆಂದರೆ, ಅದರ ವಿಷದಿಂದ ನಿಮ್ಮನ್ನು ರಕ್ಷಿಸುವವರಾರೂ ಇಲ್ಲ! ಕ್ಷಣಸಹ ತಡಮಾಡದೆ ಬೇಗನೆ ಪಲಾಯನ ಮಾಡಿರಿ!

**ಚಾಂದ**:—ಸುಕುಮಾರಿ, ಭಯವನ್ನು ಹೊಡೆದೋಡಿಸೆಂದು ನಾನು ಆಗಳೆ ನಿನಗೆ ಹೇಳಲಿಲ್ಲವೆ? ಆದರೂ ನಿನಗೆ ನನ್ನ ಮಾತಿನಲ್ಲಿ ನಂಬುಗೆ ಹುಟ್ಟ ದಾಗಿದೆ! ಇನ್ನು ನಿನಗೆ ನನ್ನಲ್ಲಿ ವಿಶ್ವಾಸವುಂಟಾಗುವಂತೆ ಹೇಗೆ ಮಾಡಲಿ? ಶೋಭನಾಂಗಿ, ನನಗೆ ಮರಣವೆಂಬುದಿಲ್ಲ—ನಾನು ಮರಣಜಯಿಯು— ಇದು ನೋಡು, ಮಹಾಜ್ಞಾನವು. ಈ ಮಹಾಮಣಿಯು ನನ್ನ ಹತ್ತಿರ ಇರುವ ವರೆಗೆ ಮೃತ್ಯುವು ನನ್ನನ್ನು ಸೋಂಕದು! ಸರ್ಪಗಳಿಂದ ನನಗೆ ಅಪಾಯವಾಗದು! ನೀನು ಭಯರಹಿತಳಾಗಿ ನಿಶ್ಚಿಂತಳಾಗು! (ಸವದಾಗರನು ಆ ತರುಣಿಯ ಶೃಂಖಲೆ ಗಳನ್ನು ಛೇದಿಸಿ ಬಂಧಮುಕ್ತಮಾಡಿದನು. ಕೈಹಿಡಿದು ಎಬ್ಬಿಸಿದನು. ಅವಳನ್ನು ಕರೆದುಕೊಂಡು ತುಸು ಮುಂದಕ್ಕೆ ಬಂದನು.)

**ತರುಣಿ**:—ಪುರುಷಸಿಂಹರೆ, ನೀವಾರು? ನೀವಿಂದು ನನಗೆ ಪ್ರಾಣದಾನ ಮಾಡಿದಿರಿ. ನಿಮ್ಮ ಈ ಉಪಕಾರವನ್ನು ಪ್ರತ್ಯುಪಕಾರದಿಂದ ತೀರಿಸುವ ಶಕ್ತಿ ನನಗಿಲ್ಲ! ಆದರೂ ನಾನು ನಿಮ್ಮ ಈ ಉಪಕಾರವನ್ನು ಆಮರಣ ನನ್ನ ಹೃದಯ ದಲ್ಲಿ ಪೋಷಿಸಿಕೊಂಡು ಶುಭಚಿಂತನೆಮಾಡುತ್ತ ಹೋಗುವೆನು. ನೀವು ಆ ಭಯಂಕರ ಸರ್ಪದಂಶನಕ್ಕೆ ತಿಲಮಾತ್ರವೂ ವಿಚಲಿತರಾಗದಿರುವುದನ್ನು ಕಂಡ ನನಗೆ ಅತ್ಯಂತ ಸೋಜಿಗವೆನಿಸಿದೆ. ನಾನಾದರೊ ಆ ಸರ್ಪದ ದರ್ಶನಮಾತ್ರದಿಂದ ಮೃತಪ್ರಾಯಳಾಗಿಹೋಗಿದ್ದೆನು! ನಿಮ್ಮಲ್ಲಿಯ ಮಹಾಮಣಿಯಿಂದ ನಿಮಗೆ ಈ ಅದ್ವಿತೀಯ ಶಕ್ತಿಯುಂಟಾಗಿದೆಯೆಂದು ನೀವು ಹೇಳಿದಿರಲ್ಲವೆ? ಎಲ್ಲಿ? ಆ ಮಹಾ ಜ್ಞಾನಮಣಿಯೆಲ್ಲಿ?

**ಚಾಂದ**:—ಈ ಅರಣ್ಯದಲ್ಲಿ ಆ ಮಹಾಮಣಿಯನ್ನು ನೋಡುವ ಗಡಿ ಬಿಡಿಯಾಕೆ? ಚಂದ್ರವದನೆ, ನಡೆ. ನಾವೀರ್ವರೂ ನನ್ನ ಅರಮನೆಗೆ ಹೋಗೋಣ. ಅಲ್ಲಿ ನೀನು ಶಾಂತಚಿತ್ತಳಾಗಿದ್ದು ಮಹಾಜ್ಞಾನವನ್ನು ನೋಡಿಕೊಳ್ಳುವೆಯಂತೆ.

**ತರುಣಿ**:—ನೀವಾರು? ನೀವು ಯಾರೆಂಬದನ್ನರಿತಹೊರತು ನಾನು...

( ಇಬ್ಬರು ಸೈನಿಕರು ಚಾಂದಸವದಾಗರನ ಸೇನಾಪತಿಯಾದ ದುರ್ಯೋಧನನ ಶವವನ್ನು ಹೊತ್ತು ತಂದು ಇಳಿಸಿದರು )

**ಒಬ್ಬ ಸೈನಿಕ** :—ಮಹಾರಾಜರೆ, ಸೇನಾಪತಿಗಳು ಹಾವು ಕಡಿದದ್ದರಿಂದ ಮೃತಪಟ್ಟಿದ್ದಾರೆ. ಇವರ ಮರಣದಿಂದ ಸೈನಿಕರು ಬೆದರಿದವರಾಗಿ ಪಲಾಯನ ಮಾಡುವುದರಲ್ಲಿದ್ದಾರೆ.

**ಚಾಂದ** :—(ಮಹಾಜ್ಞಾನವನ್ನು ದುರ್ಯೋಧನನ ಶವಕ್ಕೆ ಮುಟ್ಟಿಸುತ್ತಲೆ ದುರ್ಯೋಧನನು ಚೇತನೆಹೊಂದಿ ಎದ್ದು ನಿಂತು ಸವದಾಗರನಿಗೆ ನಮಸ್ಕರಿಸಿದನು.) ಸೇನಾಪತಿ, ನೀನು ಮತ್ತೆ ಯುದ್ಧಕ್ಕೆ ಹೊರಡು. ನಿನ್ನ ಮರಣದಿಂದ ಸೈನಿಕರೆಲ್ಲರು ಅಂಜಿ ಪಲಾಯನಕ್ಕೆ ಉದ್ಯುಕ್ತರಾಗಿರುವರಂತೆ. ನೀನು ಅವರಿಗೆ ಚನ್ನಾಗಿ ಉಪದೇಶಮಾಡು. ಅವರೆಲ್ಲರನ್ನು ಒಂದು ಸ್ಥಳವಲ್ಲಿ ಕಲೆಹಾಕು. ನಿರ್ಭಯತೆಯಿಂದ ಯುದ್ಧಮಾಡಿ ಕುರುಡೆಯಾವ ಮನಸೆಯ ಸೊಕ್ಕನಡಗಿಸು. ಸರ್ಪಕುಲವೆಲ್ಲವನ್ನೂ ಸಂಹರಿಸಿಬಿಡು.

**ದುರ್ಯೋಧನ** :—ಮಹಾಪ್ರಭುಗಳೆ, ನಾನಿದುವರೆಗೆ ಸ್ವಪ್ನದಲ್ಲಿದ್ದೆನೆ?

**ಚಾಂದ** :—ಸೇನಾಪತಿ, ಸ್ವಪ್ನದಲ್ಲಿದ್ದವನು ನೀನಲ್ಲ–ನಾನು. ಈಗಳೂ ಕನಸಿನಲ್ಲಿಯೆ ಇರುವೆನೆಂದು ಹೇಳಿದರೂ ತಪ್ಪಾಗದು. ಇರಲಿ, ಇನ್ನು ತಡಮಾಡಿ ಉಪಯೋಗವಿಲ್ಲ. ಬೇಗನೆ ಹೊರಡು. ನಾನು ಹೇಳಿದ್ದ ಸರ್ಪಕುಲ ಸಂಹಾರದ ಕಾರ್ಯವನ್ನು ತೀವ್ರವೆ ನೆರವೇರಿಸಿ, ನನಗೆ ಶುಭಸಮಾಚಾರವನ್ನು ತಿಳುಹು.

**ದುರ್ಯೋಧನ** :—ಮಹಾರಾಜರ ಅಪ್ಪಣೆಯು ಶಿರೋಧಾರ್ಯವು.
( ಮೂವರೂ ನಮಸ್ಕಾರಮಾಡಿ ಹೊರಟು ಹೋಗುವರು. )

**ತರುಣಿ** :— ( ಕೈಮುಗಿದು ) ಮಹಾರಾಜರೆ,

**ಚಾಂದ** :—ಚಂದ್ರವದನೆ, ನಿನ್ನ ಬಳಿಯಲ್ಲಿ ನಾನು ಮಹಾರಾಜನಲ್ಲ. ರಾಜನೂ ಅಲ್ಲ. ನಿನ್ನ ದಾಸಾನುದಾಸನು ಮಾತ್ರ! ಚೆಂಪಕನಗರದ ಪ್ರಜೆಗಳಿಗೆ ನಾನು ರಾಜನಾಗಬಹುದು—ಮಹಾರಾಜನಾಗಬಹುದು. ಇತರ ದೇಶಗಳ ಜನರಿಗೆ ನಾನು ಪ್ರಸಿದ್ಧ ವ್ಯಾಪಾರಿಯಾಗಬಹುದು. ನಾನು ಅರಸೊತ್ತಿಗೆಯಿಂದಲೂ ವ್ಯಾಪಾರದಿಂದಲೂ ಅಗಣಿತ ಧನವನ್ನು ಸಂಗ್ರಹಿಸಿದ್ದೇನೆ. ಅಮೌಲ್ಯ ಮುತ್ತು ರತ್ನಗಳನ್ನು ಕಲೆಹಾಕಿದ್ದೇನೆ. ಚಂಪಕನಗರದ ನನ್ನ ಅರಮನೆಯು ವೈಭವಕ್ಕೆ

ಎಣೆಯಿಲ್ಲ. ಆದರೂ ನಾನಿಂದು ನಿನ್ನ ಬಳಿಯಲ್ಲಿ ಯಾಚಕನು. ಅಪರೂಪ ಸುಂದರಿಯೂ ಅನುಪಮಗುಣಶಾಲಿನಿಯೂ ಆದ ನಿನ್ನ ಬಳಿಯಲ್ಲಿ ನಾನು ಇಂದು ದೀನತೆಯಿಂದ ಪ್ರೇಮಯಾಚನೆ ಮಾಡುತ್ತಿರುವೆನು. ಪ್ರಸನ್ನಳಾಗು. ಭಿಕ್ಷೆಯು ನೀಡಿ ಕೃತಾರ್ಥನನ್ನಾಗಿಮಾಡು.

**ತರುಣಿ**:—ಮಹಾರಾಜರೆ, ನಾನೇ ಭಿಕ್ಷುಕೆಯು. ನಿಮಗೆ ಭಿಕ್ಷೆಯನ್ನು ನೀಡುವದೆಂತು ?

**ಚಾಂದ**:—ನೀನು ಭಿಕ್ಷುಕೆಯೆ ? ಅಲ್ಲ. ಸಕಲವೈಭವಸಂಪನ್ನೆಯಾದ ನೀನು ಬಿಕ್ಕೆಬೇಡುವವಳಾಗಲಾರೆ ! ನನ್ನ ಮನಸ್ಸಿನ ಪರೀಕ್ಷೆಗಾಗಿ ನೀನು ಹೀಗೆ ಮಾತಾಡುತ್ತಿರಬಹುದು. ನಿನ್ನ ಈ ಪರೀಕ್ಷೆಯಲ್ಲಿ ನಾನು ಅನುತ್ತೀರ್ಣನಾಗುವೆನೆಂದು ಮಾತ್ರ ನೀನು ಭಾವಿಸಬೇಡ ! ನಿನಗೆ ಬೇಕಾದುದನ್ನು ಬೇಡಿಕೊಳ್ಳು. ತಕ್ಷಣವೆ ನಾನದನ್ನು ಸಲ್ಲಿಸುವೆನು. ಬಹಳವೇನು ? ನೀನು ನನ್ನ ಪ್ರಾಣವನ್ನು ಬೇಡಿದರೂ, ನಾನದನ್ನು ನಿನಗಾಗಿ ಸಂತೋಷದಿಂದ ಕೊಡಬಲ್ಲೆನು ?

**ತರುಣಿ** :—ಮಹಾರಾಜರೆ, ಮಾತಾಡುವದು ಹಗುರು. ಆದರೆ ಆಡಿದಂತೆ ಮಾಡುವುದು ಮಾತ್ರ ಕಠಿಣ. ನೀವು ಮೋಹದಭರದಲ್ಲಿ ಮನಬಂದಂತೆ ಮಾತಾಡುತ್ತ ನಡೆದಿರುವಿರಿ. ಈ ಮಾತುಗಳನ್ನೆ ನಾನು ನಿಮ್ಮ ವಚನಗಳೆಂದು ಭಾವಿಸಿ ಬೇಡಿಕೆಯನ್ನು ಬೇಡಿಕೊಳ್ಳಹತ್ತಿದೆನೆಂದರೆ, ನಿಮ್ಮ ಬಣ್ಣ ಹೊರಬೀಳದಿರದು !

**ಚಾಂದ**:—ಸುಂದರಿ, ನನ್ನ ಸಲುಗೆಯ ದುರುಪಯೋಗಮಾಡಿಕೊಳ್ಳದಿರು-ನನ್ನನ್ನು ವಚನಭ್ರಷ್ಟನೆಂದು ತಿರಸ್ಕರಿಸದಿರು. ಈ ಚಾಂದಸವದಾಗರನು ಹುಸಿಮಾತುಗನ್ನಾಡತಕ್ಕವನಲ್ಲ. ಆಡಿದ ಮಾತುಗಳನ್ನು ಹೊರಳಿಸತಕ್ಕವನಲ್ಲ.

**ತರುಣಿ**:—ಮಹಾರಾಜರೆ, ಅಂಗೈಯಲ್ಲಿರುವವನ್ನು ನೋಡಿಕೊಳ್ಳಲಿಕ್ಕೆ ಕನ್ನಡಿಯೇತಕ್ಕೆ ಬೇಕು ? ನಿಜವಾಗಿಯೂ ನಾನು ಯಾಚಕಳಾಗಿ ಬಂದವಳು. ನಿಮ್ಮಿಂದ ಪ್ರಾಣದಾನವನ್ನು ಪಡೆದವಳು. ನನಗೆ ಮಹದುಪಕಾರಮಾಡಿದ್ದ ನಿಮ್ಮನ್ನು ಮತ್ತೆ ವಚನಬದ್ಧತೆಯಲ್ಲಿ ತೊಡಕಿಸಿ ವಿಪತ್ತಿಗೆ ಗುರಿಮಾಡುವ ಮನಸ್ಸು ನನಗಿರಲಿಲ್ಲ. ಆದರೆ ನಿರ್ವಾಹವಿಲ್ಲದಾಗಿದೆ. ನಿಮ್ಮಲ್ಲಿಯ ಮತ್ತೊಂದು ವಸ್ತುವು ನನಗೆ ಅವಶ್ಯವಾಗಿ ಬೇಕಿದೆ. ಕೇಳಿಕೊಳ್ಳಲಿಯಾ ?

**ಚಾಂದ :**—ಮನೋಹರೆ, ಕೇಳು. ನಿಸ್ಸಂಕೋಚವೃತ್ತಿಯಿಂದ ಕೇಳು. ಇಗೋ, ವಚನವು ಬೇಕಿದ್ದರೆ ಕೊಡುವೆನು, ತಕ್ಕೊಳ್ಳು. ನೀನು ಯಾವುದನ್ನು ಬೇಡಿದರೂ ನಾನು ಕೊಡಲಾರೆನೆಂದು ಹೇಳಲಿಕ್ಕಿಲ್ಲ. ಈಗಲಾದರೂ ನಿನ್ನ ಸಂದೇಹವು ಸರಿಯಿತಷ್ಟೆ? ಆದರೆ——

**ತರುಣಿ :**—ಆದರೆ—ಎಂದೆಂದು ಮಾತನ್ನು ತಡೆದಿರಲ್ಲ. ಇದರಿಂದ ನಿಷ್ಕಾಮಬುದ್ಧಿಯಿಂದ ವಚನಪಾಲಿಸುವ ಇಚ್ಛೆಯು ನಿಮಗಿಲ್ಲದಾಗಿ ತೋರುತ್ತಿದೆ.

**ಚಾಂದ :**—ಬುದ್ಧಿಮತಿಯೆ, ಆಹುದು. ನನ್ನ ದಾನಕ್ಕೆ ಪ್ರತಿಯಾಗಿ ನೀನು ನನ್ನದೊಂದು ಮಾತು ನಡಿಸಲಿಕ್ಕೆಬೇಕು.

**ತರುಣಿ :**—ಅದೇನು ?

**ಚಾಂದ :**—ನೀನು ನನ್ನ ಅರಮನೆಗೆ ಬರಲಿಕ್ಕೆ ಬೇಕು. ನಿನಗಾಗಿ ಸುಂದರವಾದೊಂದು ಮಂದಿರವನ್ನು ಕಟ್ಟಿಸುವೆನು. ಸುವರ್ಣಮಯವೂ ರತ್ನಖಚಿತವೂ ಆದ ಆಸನವನ್ನು ರಚಿಸುವೆನು. ಈ ಸಿಂಹಾಸನದ ಮೇಲೆ ನಿನ್ನನ್ನು ಕುಳ್ಳಿರಿಸಿ ಪೂಜಿಸುವೆನು. ಅಹಹ, ಎಂತಹ ಅಪರೂಪವಿದು! ಸೌಂದರ್ಯವು ರೂಪುಗೊಂಡು ಜೀವಕಳೆಹೊಂದಿ ನನ್ನೆದುರಿಗೆ ನಿಂತಂತೆ ಕಾಣುತ್ತಿದೆ! ದೇವತೆಗಳ ರೂಪದ ಖ್ಯಾತಿಯನ್ನು ನಾನು ಹಲವರಿಂದ ಕೇಳಿದ್ದೇನೆ. ಅವರ ಅತಿಶಯೋಕ್ತಿಯಿಂದ ಕೂಡಿದ ದೇವತೆಗಳ ರೂಪದ ವರ್ಣನೆಯೂ ನಿನ್ನನ್ನು ನೋಡಿದ ಬಳಿಕ ನಿಸ್ಸಾರವೆಂದೆನಿಸಿ ಹೋಗುವುದು. ಮಾನಿನಿಯೆ, ಒಲ್ಲೆನ್ನದಿರು. ಕೃಪಾವಶಳಾಗಿ ಈ ದಾಸನ ಬೇಡಿಕೆಯನ್ನು ಮನ್ನಿಸು.

**ತರುಣಿ :**—ಮಹಾರಾಜರೆ, ಇನ್ನು ವರ್ಣನೆಯನ್ನು ಸಾಕುಮಾಡಿರಿ. ನಾನು ನಿಮ್ಮ ಬಿನ್ನಹವನ್ನು ಅಲ್ಲಗಳೆಯುವದಿಲ್ಲ. ನಾನು ನಿಮ್ಮ ಇಚ್ಛೆಯ ಮೇರೆಗೆ ಚಂಪಕನಗರದ ಪ್ರಾಸಾದಕ್ಕೆ ಬರಲಿಕ್ಕೆ ಒಪ್ಪಿಕೊಳ್ಳುತ್ತೇನೆ.

**ಚಾಂದ :**—ದೇವಿ, ಇನ್ನು ತಡವೇಕೆ ? ಹೊರಡೋಣ ನಡೆ.

**ತರುಣಿ :**—ನಿಮ್ಮ ವಚನದ ಸುದ್ದಿಯನ್ನು ಮರೆದೇ ಬಿಟ್ಟಿರಲ್ಲ! ನೀವು ಮರೆತರೂ ನಾನು ಮರೆಯುವಂತಿಲ್ಲ! ನಾನು ಚಂಪಕನಗರದ ಅರಮನೆಗೆ ಹೊರಡುವ ಮೊದಲು ನನ್ನ ಮುಪ್ಪಿನ ತಂದೆಯ ಪ್ರಾಣವನ್ನು ಬದುಕಿಸಿಕೊಳ್ಳಬೇಕಾಗಿದೆ!

**ಚಾಂದ:**—ನಿಮ್ಮ ತಂದೆಯೂ ಸರ್ಪದಂಶನದಿಂದ ಮಡಿದಿರುವನೆ? ಹೀಗಿದ್ದರೆ, ನನ್ನನ್ನು ಅವನ ಹತ್ತಿರ ಕರೆದೊಯ್ಯು. ನಾನು ಕೂಡಲೆ ಅವನು ಮತ್ತೆ ಜೀವಿಸುವಂತೆ ಮಾಡುವೆನು.

**ತರುಣಿ:**—ನನ್ನ ಜನಕನು ಉರಗದಂಶನದಿಂದಲೆ ಸತ್ತಿದ್ದಾನೆ. ಆದರೆ ಅವನು ಇಲ್ಲಿ ಇಲ್ಲ. ಕಾಲೀಮಡುವಿನ ತಳದಲ್ಲಿ ಪಾತಾಳಲೋಕದಲ್ಲಿದ್ದಾನೆ. ನಾನು ಅಲ್ಲಿಗೆ ಹೋಗಿ ಅವನ ಜೀವವನ್ನು ತಿರುಗಿಸಬೇಕು.

**ಚಾಂದ:**—ಅವನು ಪಾತಾಳಲೋಕದಲ್ಲಿ ಏಕೆ ಇದ್ದಾನೆ?

**ತರುಣಿ**—ಅವನು ಮತ್ಸ್ಯರಾಜನು. ಪಾತಾಳಲೋಕದ ನಿವಾಸಿಯು. ಏಕನಿಷ್ಠ ಶಿವಭಕ್ತನು. ಆದರೆ ದುಷ್ಟೆಯಾದ ಮನಸಾದೇವಿಯು ತನ್ನ ಪೂಜೆ ಮಾಡಬೇಕೆಂದು ನನ್ನ ತಂದೆಗೆ ಜುಲುಮೆಮಾಡಿದಳು. ಆದರೂ ನನ್ನ ಪಿತನು ಮನಸೆಯ ಮಾತಿಗೆ ಒಪ್ಪಲಿಲ್ಲ. ಇದರಿಂದ ಕುಪಿತಳಾದ ಮನಸಾದೇವಿ ಹಾವುಗಳ ಹಾವಳಿಯಿಂದ ಪಾತಾಳಲೋಕವನ್ನು ಹಾಳುಮಾಡಿಬಿಟ್ಟಳು. ನನ್ನ ತಾಯಿಯೂ ಅಣ್ಣತಂಗಿಯರೂ ಅಕ್ಕತಮ್ಮಂದಿರೂ ಸರ್ಪದಂಶನಕ್ಕೆ ಆಹುತಿಯಾದರು. ಇಷ್ಟಾದರೂ ನನ್ನ ಪಿತನು ಮನಸಾದೇವಿಯ ಪೂಜೆಗೆ ಮನಸ್ಸುಮಾಡಲಿಲ್ಲ. ಕಾರಣ ಇಂದಿನ ದಿವಸ ನನ್ನ ಜನಕನು ಸರ್ಪದಂಶನಕ್ಕೆ ಆಹುತಿಯಾಗಿ ಪಾತಾಳಲೋಕದಲ್ಲಿ ಮಡಿದುಬೀಳಬೇಕಾಯಿತು. ನಾನು ಮನಸೆಯ ಹಾವುಗಳ ಕೈಯಿಂದ ಪಾರಾಗಿ ಬಹು ಕಷ್ಟಪಟ್ಟು ಇಲ್ಲಿಗೆ ಬಂದೆನು. ಇಲ್ಲಿಯೂ ಹಾವುಗಳ ಹಾವಳಿ ತಪ್ಪಲಿಲ್ಲ. ಮುಂದಿನ ಸಂಗತಿಯನ್ನು ನೀವು ಕಣ್ಣುಟ್ಟ ಕಂಡಿರುವಿರಿ.

**ಚಾಂದ:**—ಅಯ್ಯೊ, ದುಷ್ಟಮನಸೆಯೆ, ಮತ್ಸ್ಯರಾಜನನ್ನು ನೀನು ಹೀಗೆ ಗೋಳಿಡಿಸಿದೆಯಾ? ಈ ಕೋಮಲೆಗೆ ಭಯಂಕರ ತಾಪವಿತ್ತೆಯಾ? ತುಸು ತಡೆ. ನಾನು ನಿನ್ನ ಅಹಂಕಾರವನ್ನು ಪೂರಾ ಬಗ್ಗುಬಡೆಯುವೆನು! (ಕ್ಷಣಕಾಲ ಸುಮ್ಮನಿದ್ದು ಮತ್ತೆ) ಕೋಮಲೆ, ಈಗ ಆ ಕುರುಡ ಮನಸೆಯಮಾತೆತ್ತಿ ಉಪಯೋಗವಿಲ್ಲ. ನನ್ನನ್ನು ಕರೆದುಕೊಂಡು ಪಾತಾಳಲೋಕಕ್ಕೆ ನಡೆ. ನಿನ್ನ ತಂದೆಯ ಶವವನ್ನು ತೋರು. ಈ ಮಹಾಜ್ಞಾನದ ಸ್ಪರ್ಶದಿಂದ ನಾನು ಕೂಡಲೆ ನಿನ್ನ ಜನಕನನ್ನು ಬದುಕಿಸುವೆನು.

**ತರುಣಿ:**—ನೀವು ಅಲ್ಲಿಗೆ ಹೇಗೆ ಬರುವಿರಿ?

**ಚಾಂದ:**—ಏಕೆ ಬರಲಾಗದು? ನೀನು ನನ್ನ ಕೈ ಹಿಡಿದು ಕರೆದೊಯ್ಯು.

**ತರುಣಿ:**—ಹೇಗಾದರೂ ನೀವು ಅಲ್ಲಿಗೆ ಬರಲಾರಿರಿ. ಕಾಲೀಮಡುವಿನಲ್ಲಿ ಹಾಯ್ದು ಪಾತಾಳಲೋಕವನ್ನು ಪ್ರವೇಶಿಸಲಿಕ್ಕೆ ನಿಮಗೆ ಬಾರದು.

**ಚಾಂದ:**— ಹೀಗಿದ್ದರೆ ಉಪಾಯವಿಲ್ಲ ! ನಾನೇನು ಮಾಡಲಿ ಹೇಳು ?

**ತರುಣಿ:**—ನಾನು ಬೇಡಿದ್ದನ್ನು ಕೊಡುತ್ತೇನೆಂದು ನೀವು ವಚನಬದ್ಧರಾಗಿರುವಿರಷ್ಟೆ ? ನಿಮ್ಮ ಈ ವಚನವು ನೆನಪಿದೆ ? ಇಲ್ಲವೆ ಈ ಅಲ್ಪಾವಧಿಯಲ್ಲಿ ಮರೆದು ಬಿಟ್ಟಿರುವಿರಾ ?

**ಚಾಂದ:**— ಸುಂದರಿ, ನೀನು ಪರಿಹಾಸಮಾಡುತ್ತಿರುವಂತೆ ತೋರುತ್ತದೆ! ಈ ಚಾಂದಸವದಾಗರನು ಕೊಟ್ಟ ವಚನವನ್ನು ಕಾಲತ್ರಯದಲ್ಲೂ ಮರೆಯತಕ್ಕವನಲ್ಲ ! ಮುರಿಯತಕ್ಕವನಲ್ಲ ?

**ತರುಣಿ:**—ಹೀಗಿದ್ದರೆ, ಕೊಟ್ಟುಬಿಡಿರಿ. ( ಕೈಯೊಡ್ಡುವಳು )

**ಚಾಂದ:**—ಏನು ಕೊಡಲಿ ?

**ತರುಣಿ:**—ನಿಮ್ಮಲ್ಲಿಯ ಈ ಮಹಾಜ್ಞಾನಮಣಿಯನ್ನು.

**ಚಾಂದ:**— ಆದರೆ

**ತರುಣಿ:**—ವಚನ ಬದ್ಧರು ನೀವು !

( ಚಾಂದಸವದಾಗರನು ಕೆಲ ಹೊತ್ತು ಸುಮ್ಮನೆ ನಿಂತುಕೊಳ್ಳುವನು )

**ತರುಣಿ:**—ಈಗ ನೀವು ನನಗೆ ಮಹಾಜ್ಞಾನವನ್ನು ಕೊಡಿರಿ. ನಾನದನ್ನು ತಕ್ಕೊಂಡು ಪಾತಾಳಲೋಕಕ್ಕೆ ಹೋಗುವೆನು. ಸತ್ತುಬಿದ್ದಿರುವವರನ್ನೆಲ್ಲ ಬದುಕಿಸಿಕೊಂಡು, ಅವರನ್ನು ಕೂಡಿಕೊಂಡು ಮತ್ತೆ ಇಲ್ಲಿಗೆ ಬರುವೆನು. ಬಳಿಕ ನಾವೆಲ್ಲರೂ ಸಮವೇತರಾಗಿ ಚಂಪಕನಗರಕ್ಕೆ ಪ್ರಯಾಣಮಾಡೋಣ. ಮಹಾರಾಜರೆ, ನನ್ನ ಮಾತಿನಲ್ಲಿ ನಿಮಗೆ ನಂಬುಗೆಯುಂಟಾಗಲೊಲ್ಲದೆ ? ನೀವು ನನಗೆ ಮಹಾಜ್ಞಾನವನ್ನು ಕೊಡಲಾರಿರಾ ?

**ಚಾಂದ:**—ವಚನಭ್ರಷ್ಟನಾಗುವವನು ನಾನಲ್ಲ ! ತಕ್ಕೊ. ( ಕೊಡುವನು)

**ತರುಣಿ:**—( ಮಹಾಜ್ಞಾನವನ್ನು ತಕ್ಕೊಂಡು ) ಇನ್ನು ನನಗೆ ಅಪ್ಪಣೆ ಕೊಡಿರಿ. ಪಾತಾಳಲೋಕಕ್ಕೆ ಹೋಗಿಬರುವೆನು. ( ಕಾಲೀಮಡುವಿನ ಕಡೆಗೆ ನಡೆಯ ಹತ್ತಿದಳು )

**ಚಾಂದ:**—( ಉದ್ಭ್ರಾಂತನಾಗಿ ) ಸುಂದರಿ, ನಾನು ನಿನ್ನ ದಾರಿಯ ಕಾಯುತ್ತ ಇಲ್ಲಿಯೆ ಕುಳಿತಿರುವೆನು.

**ತರುಣಿ:**—(ನೀರಿನಲ್ಲಿಳಿದು ಮಂದಹಾಸದಿಂದ) ಕಣ್ಣುಮುಚ್ಚಿ ಕಣ್ಣು ತೆರೆಯುವಷ್ಟರಲ್ಲಿಯೆ ನಾನು ಬರುವೆನು !

**ಚಾಂದ:**—ಮನಮೋಹನೆ, ಕೊಂಚ ನಿಲ್ಲು. ನಾನು ನಿನ್ನ ನಾಮವನ್ನರಿಯೆನು. ಒಂದು ವೇಳೆ ನೀನು ಬರಲಿಕ್ಕೆ ತಡಮಾಡಿದರೆ, ನಾನು ಯಾವ ಹೆಸರಿನಿಂದ ನಿನ್ನನ್ನು ಕೂಗಲಿ ? ಎಂಬದನ್ನು ಹೇಳಿಟ್ಟು ಹೋಗು.

**ತರುಣಿ:**—(ಕಾಲೀದಹದಲ್ಲಿ ಅದೃಶ್ಯಳಾಗುವ ಸಮಯದಲ್ಲಿ) "ಛಳನೆ" "ಛಳನೆ" "ಛಳನೆ" ಸವದಾಗರನೆ, ನನ್ನ ಹೆಸರನ್ನರಿತುಕೊಂಡೆಯಾ ? (ಸೌದಾಗರನು ಹುಚ್ಚನಂತಾಗಿ ಹೋಗುವನು. ಕಾಲೀಮಡುವಿನಲ್ಲಿ ಪದ್ಮಾಸನಸ್ಥಳಾದ ಮನಸಾದೇವಿಯು ಕಾಣಿಸಿಕೊಳ್ಳುವಳು.)

**ಚಾಂದ:**—ನಿನ್ನ ಹೆಸರು ಛಳನೆಯೆ ? ನಿಜವಾಗಿಯೂ ನೀನು ಛಳನೆಯೆ ? ಅಯ್ಯೋ ನಾನು ಮೋಸಹೋದೆನು !

**ಮನಸಾ:**—ಸವದಾಗರನೆ, ಮಿಂಚಿಹೋದ ಮಾತಿಗೆ ಚಿಂತಿಸಿ ಪ್ರಯೋಜನವಿಲ್ಲ !

**ಚಾಂದ:**—ನನ್ನ ಆ ಮಹಾಮಣಿಯೆಲ್ಲಿ ? ಮಹಾಜ್ಞಾನವೆಲ್ಲಿ ?

**ಮನಸಾ:**—(ಮಹಾಜ್ಞಾನವನ್ನು ತೋರಿ) ಸವದಾಗರನೆ, ಇಲ್ಲಿ ನೋಡು ನಿನ್ನ ಆ ಮಹಾಮಣಿಯದೆ ! ಆದರೆ ಇದು ಇನ್ನು ನಿನಗೆ ದೊರೆಯದು ! ಒತ್ತಾಯದಿಂದ ನೀನಿದನ್ನು ನನ್ನಿಂದ ಕಸಿದುಕೊಳ್ಳಲಾರೆ ! ಆದರೆ ನೀನು ನನ್ನ ಪೂಜೆಯನ್ನು ಮಾಡಲೊಡಂಬಟ್ಟರೆ, ಪ್ರಸನ್ನಳಾದ ನಾನು ನಿನಗೆ ಈ ಮಹಾಮಣಿಯನ್ನು ದಾನಮಾಡಬಲ್ಲೆನು.

**ಚಾಂದ:**—(ಹಲ್ಲು ಕಡಿಯುತ್ತ) ನಿನ್ನ ಪೂಜೆಯೆ ? ಅಪದೇವತೆಯ ಪೂಜೆಯೆ ? ಎಂದಿಗೂ ಆಗದು !

**ಮನಸಾ:**—ಸವದಾಗರನೆ, ನಾನು ಹೇಳುವ ಮಾತನ್ನು ಲಕ್ಷವಿರಿಸಿ ಕೇಳು. ಅವಿವೇಚನೆಗೊಳಗಾಗಿ ಹಾಳಾಗಬೇಡ. ಹಟಕ್ಕೆ ಬಿದ್ದು ಕೆಡಬೇಡ. ನೀನು ನನ್ನ ಪೂಜೆಯನ್ನು ಮಾಡಿದರೆ, ನಿನಗೆ ಯಾವ ಕೊರತೆಯೂ ಉಂಟಾಗದಂತೆ ಅನುಗ್ರಹಿಸುವೆನು. ನೀನು ಇಹಲೋಕದಲ್ಲಿಯೆ ಧನ- ರತ್ನ- ಪುತ್ರ- ಮಿತ್ರ- ಕಳತ್ರರಿಂದ ಯುಕ್ತನಾಗಿ ಸ್ವರ್ಗಸೌಖ್ಯವನ್ನು ಅನುಭವಿಸುವಂತೆ ಮಾಡುವೆನು. ನೀನು ನನ್ನ ಈ ಹಿತವಚನಗಳಿಗೆ ಕಿವಿಗೊಡದೆ, ನನ್ನನ್ನು ತಿರಸ್ಕರಿಸಿದರೆ, ಅನಂತವಾದ ದುಃಖಗಳಿಗೆ ಗುರಿಯಾಗುವೆ !

**ಚಾಂದ**:—( ತಿರಸ್ಕಾರದಿಂದಲೂ, ಕೋಪದಿಂದಲೂ, ಆವೇಶದಿಂದಲೂ) ಥೂ, ನಿನ್ನ ಮೋರೆಗೆ ಬೆಂಕಿಹಚ್ಚಲಿ! ಎಂತಹ ಪ್ರಸಂಗವೊದಗಿದರೂ ನಾನು ನಿನ ಪೂಜೆಯನ್ನು ಮಾಡಲಿಕ್ಕಿಲ್ಲ, ತಿಳಿಯಿತೆ! ನೀನು ತೋರುತ್ತಿರುವ ಸ್ವರ್ಗಸುಖದ್ದ ಆಶೆಗೆ ಬಲಿಬೀಳುವವನು ನಾನಲ್ಲ! ನೀನು ತೋರಿಸ ಬೆದರಿಕೆಗೆ ಹೆದರಿ ನಿನ್ನ ಅನುಗತನಾಗುವ ಹೇಡಿಯು ನಾನಲ್ಲ! ಸ್ವರ್ಗದಲ್ಲಿಯ ಶ್ರೀಶಂಕರನು ನನ್ನ ರಕ್ಷಕ ನಾಗಿದ್ದಾನೆ. ಭೂಮಿಯಮೇಲಿನ ನನ್ನ ಗುರು ಧನ್ವಂತರಿಯು ರಕ್ಷಾಕವಚದಂತಿ ದ್ದಾನೆ. ಹೀಗಿರಲು ನಾನು ನಿನಗೆ ಭಯಗೊಳ್ಳುವೆನೆ? ನಿನಗೆ ಶತಶಃ ಧಿಕ್ಕಾರ ವಿರಲಿ! ನಡೆಯುತ್ತ! ( ಕಾಲಿನಿಂದ ನೆಲವನ್ನೊದೆಯುವನು.)

---

## ಎರಡನೆಯ ಪ್ರವೇಶ

( ಚಂಪಕನಗರದಲ್ಲಿಯ ಧನ್ವಂತರಿಯ ಮನೆಯ ಬಹಿರ್ಭಾಗ. ಧನೇಶ್ವರ ಮನೇಶ್ವರರೆಂಬ ಶಿಷ್ಯದ್ವಯರು ಮಾತಾಡುತ್ತ ಕುಳಿತಿದ್ದಾರೆ. ಗೌಳಿಗಿತ್ತಿಯ ವೇಷದಲ್ಲಿ ಮನಸಾದೇವಿಯು ಪ್ರವೇಶಿಸುವಳು.)

**ಮನಸಾ**:—ಹಾಲು—ಮೊಸರು—ಬೆಣ್ಣೆ ತಂದಿದ್ದೇನೆ. ಯಾರಿಗೆಬೇಕು? ಬನ್ನಿರಿ. ಕೊಳ್ಳಿರಿ.

**ಧನ**:—ಹಾಲು ಬೇಕು. ಮೊಸರು ಬೇಕು. ಬೆಣ್ಣೆ ಬೇಕು. ಬೇಡಾದ್ದು ಯಾವುದೂ ಇಲ್ಲ!

**ಮನ**:—ಬರೇ ಬೇಕು ಇಷ್ಟೆ ಅಲ್ಲ; ತಿನ್ನಲಿಕ್ಕೆ ಬೇಕು. ಅದರಲ್ಲೂ ಹೊಟ್ಟೆ ತುಂಬ ತಿನ್ನಲಿಕ್ಕೆ ಬೇಕು!

**ಧನ**:—ಗೌಳಗಿತ್ತಿ, ನಾನು ಇದುವರೆಗೆ ನಿನ್ನನ್ನು ಕಂಡವನಲ್ಲ. ಹೊಸಬ ಳಾಗಿರುವಂತೆ ಕಾಣುತ್ತಿರುವೆ.

**ಮನ**:—ನಿನ್ನಂಥ ಚಲುವೆಯಾದ ಗೌಳಿಗಿತ್ತಿಯನ್ನು ನಾನಿದುವರೆಗೆ ಎಲ್ಲಿಯೂ ನೋಡಿದವನಲ್ಲ!

**ಧನ**:—ನೀನು ಒಳ್ಳೆ ಸುಂದರಿಯಾಗಿರುವೆ! ನಿನ್ನ ಮುಖದ ಕಡೆಗೆ ಹರಿ ದಿದ್ದ ನನ್ನ ನೋಟವನ್ನು ಹೊರಳಿಸಲಿಕ್ಕೆ ನನಗಾಗದಿದೆ! ನಿನ್ನ ಮುಖವು ಇಷ್ಟು ಚಂದವಿದ್ದಬಳಿಕ ನೀನು ತಂದಿರುವ ಸಾಮಾನುಗಳು ಬಹು ರುಚಿಕರವಿರಲಿಕ್ಕೆ ಬೇಕೆಂಬುದು ಸಹಜವಾದದ್ದು!

**ಮನ:**—ಗೌಳಿಗಿತ್ತಿ, ಬಹಳ ಮಾತಾಡುವುದರಿಂದ ಪ್ರಯೋಜನವಿಲ್ಲ! ನೀನು ಅತಿಶಯ ರೂಪವತಿಯಾಗಿರುವೆ. ನಿನ್ನನ್ನು ನೋಡಿ ನಾನು ಸಂತುಷ್ಟನಾಗಿ ಹೋಗಿದ್ದೇನೆ.

**ಮನಸಾ:**—ನನ್ನನ್ನು ನೋಡುವದರಿಂದ ನಿಮಗೆ ಆನಂದವಾಗಿದೆಯಷ್ಟೆ? ಹಾಗೆಯೆ ನಿಮ್ಮನ್ನು ನೋಡಿ ನಾನು ಸಂತೋಷಿತಳಾಗಬೇಕಾದ್ದು ಕ್ರಮಪ್ರಾಪ್ತವು. ಆದರೆ ಕೇವಲ ನಿಮ್ಮ ಮೋರೆಯನ್ನು ನೋಡಿದ್ದರಿಂದ ಆನಂದಗೊಳುವವಳು ನಾನಲ್ಲ. ನೀವು ನನ್ನನ್ನು ಆನಂದಗೊಳಿಸಬೇಕಾದರೆ, ನನ್ನದೊಂದು ಕೆಲಸವನ್ನು ಮಾಡಿಕೊಡಲಿಕ್ಕೆ ಬೇಕು.

**ಧನ:**—ನಿನ್ನ ಕೆಲಸ ಮಾಡಿಕೊಡಲಿಕ್ಕೆ ನನಗೆ ಪ್ರತಿಫಲವನ್ನೇನು ಕೊಡುವೆ?

**ಮನ:**—ನಾವು ನಿರರ್ಥಕ ಕೆಲಸಮಾಡತಕ್ಕವರಲ್ಲ!

**ಮನಸಾ:**—ನಾನು ಕೂಲಿಯನ್ನು ತಕ್ಕೊಳ್ಳದೆ ಕೆಲಸಮಾಡಿರೆಂದು ಹೇಳುವದಿಲ್ಲ. ನೀವು ನನ್ನ ಕೆಲಸವನ್ನು ಕಡೆಗಾಣಿಸಿ ಕೊಟ್ಟರೆ, ನಾನು ನೀವು ಬೇಡಿದ್ದನ್ನು ಕೊಡಲಿಕ್ಕೆ ಸಿದ್ಧಳಿರುವೆನು. ಗೋಪಾಲರೆ, ನಿಮಗೆ ಮೊಸರು ಬೇಕೆ? ಹಾಲು ಬೇಕೆ? ಬೇಕಾದರೆ ಬೆಣ್ಣೆಯನ್ನು ಕೊಡುವೆನು.

**ಧನ:**—(ಸಿಟ್ಟಿನಿಂದ) ನಾವು ಗೋಪಾಲರೆ?

**ಮನ:**—ನೀನು ನಮ್ಮನ್ನು ದನಕಾಯುವವರೆಂದು ತಿರಸ್ಕರಿಸಿದೆಯಾ?

**ಮನಸಾ:**—ಈ ಅರ್ಥದಿಂದ ನಾನು ನಿಮಗೆ ಗೋಪಾಲರೆಂದು ಸಂಬೋಧಿಸಿದವಳಲ್ಲ!

**ಧನ:**—ಹಾಗಾದರೆ, ಮತ್ತೆ ಯಾವ ಅರ್ಥದಿಂದ ನಮಗೆ ಗೋಪಾಲರೆಂಬ ಹೆಸರಕೊಟ್ಟೆ? ನಮಗೇನೂ ಹೊಳೆಯುವದಿಲ್ಲೆಂದು ನೀನು ತಿಳಿದಿರುವೆಯೇನು? ನೀನು ತಿಳಿದಿರುವಂತೆ ನಾವು ಮೂರ್ಖರಲ್ಲ! ನಾವು ಶಾಲೆಗೆ ಹೋಗಿದ್ದೆವು. ಓದು-ಬರಹಗಳನ್ನು ಕಲಿತಿದ್ದೆವು. ನಮಗೆ ತಿಳಿಯದ್ದಾವುದೂ ಇಲ್ಲ!

**ಮನ:**—ಎಲೆ, ಗೌಳಿಗಿತ್ತಿ, ನೀನು ನಮಗೆ ಗೋಪಾಲರೆಂದು ಹೇಗೆ ಹೆಸರಿಟ್ಟೆ? ಹಾಲು-ಮೊಸರುಗಳನ್ನು ಮಾರಬಂದು ಮನಬಂದಂತೆ ಮಾತಾಡುವೆಯಾ? ನಿನಗೆ ನಮ್ಮ ಕೈತೋರಿಸೋಣವೇನು?

**ಮನಸಾ:**—ಸ್ವಾಮಿೊ ಮಹಾಪಂಡಿತರೆ, ಗೋಪಾಲನೆಂದರೆ ಶ್ರೀಕೃಷ್ಣ ನೆಂಬುದು ನಿಮಗೆ ಹೊಳೆಯಬಾರದೆ ? ಗೋಪಾಲ ಎಂಬ ನಾಮವು ತಿರಸ್ಕೃತ ವಲ್ಲ. ಸ್ವಯಂ ಶ್ರೀಕೃಷ್ಣನು ಗೋಪಾಲನೆಂದು ಖ್ಯಾತನಾಗಿರುವುದನ್ನು ನೀವು ಪುರಾಣಗಳಲ್ಲಿ ಓದಿಕೊಂಡಿಲ್ಲವೆ ?

**ಧನ:**—ಗೋಪಿಕಾಸ್ತ್ರೀಗೆ ಶ್ರೀಕೃಷ್ಣನು ಸುಂದರಾಕಾರನಾಗಿ ತೋರಿದಂತೆ ನಿನಗೆ ನಾವೀರ್ವರು ಕಾಣಿಸಿರಬಹುದಲ್ಲವೆ ? ಅಂತೆಯೆ ನೀನು ನಮ್ಮನ್ನು ಗೋಪಾಲರೆಂಬ ಪ್ರೀತಿಯ ಹೆಸರಿನಿಂದ ಕರೆದಿರಬಹುದು !

**ಮನ:**—ಕೃಷ್ಣನು ಸಣ್ಣವನಿದ್ದಾಗ ದನಗಳನ್ನು ಕಾಯಲಿಲ್ಲವೆ? ಅಂತೆಯೆ ಅವನಿಗೆ ಗೋಪಾಲನೆಂಬ ಹೆಸರುಂಟಾಯಿತು. ಗೋಪಾಲನೆಂದರೆ ದನಗಾಹಿ. ಈ ಹೆಸರು ನಮಗೆ ಬೇಡ !

**ಮನಸಾ:**—ನಿಮ್ಮನ್ನು ಯಾವ ಹೆಸರಿನಿಂದ ಕರೆಯಲಿ ?

**ಧನ:**—ಧನೇಶ್ವರನೆಂದು.

**ಮನ:**—ಮನೇಶ್ವರನೆಂದು.

**ಮನಸಾ:**—ಉತ್ತಮವಾದ ಹೆಸರುಗಳು. ಧನೇಶ್ವರ ಬಹದ್ದೂರ, ಮನೇಶ್ವರ ಬಹದ್ದೂರ, ಇನ್ನು ನೀವು ನನ್ನ ವಿಜ್ಞಾಪನೆಯನ್ನು ಚಿತ್ತಗೊಟ್ಟು ಕೇಳಬೇಕು. ನಾನಿಂದು ಧನ್ವಂತರಿ ಗುರುಗಳ ದರ್ಶನ ತಕ್ಕೊಳ್ಳಬೇಕಾಗಿದೆ. ತೀರ ಜರೂರಿಯ ಕೆಲಸವಿದೆ. ನೀವು ನಮಗೆ ಅವರ ದರ್ಶನಮಾಡಿಸಬೇಕು.

**ಧನ-ಮನರು:**—(ಒಮ್ಮೆಲೆ)ಉಹು-ಉಹು-ಉಹು ( ತಲೆಯಲ್ಲಾಡಿಸುವರು )

**ಧನ:**—ಇಂದು ನಿನಗೆ ಗುರುಗಳ ದರ್ಶನವಾಗದು !

**ಮನ:**—ನಿನಗೊಬ್ಬಳಿಗೇ ಏಕೆ, ಬ್ರಹ್ಮ- ವಿಷ್ಣು- ಮಹೇಶ್ವರರು ಬಂದರೂ ಗುರುಗಳು ಕಾಣಿಸಿಕೊಳ್ಳರು !

**ಮನಸಾ:**—ಅದೇಕೆ ? ಹೀಗಾಗಲಿಕ್ಕೆ ಕಾರಣವೇನು ?

**ಧನ:**—ಗೌಳಿಗಿತ್ತಿಯೆ, ಈ ವಿಷಯದಲ್ಲಿ ಇನ್ನು ನೀನು ನನಗೆ ಪ್ರಶ್ನೆ ಮಾಡಬೇಡ !

**ಮನ:**—ಕಾರಣವನ್ನು ಸಹ ವಿಚಾರಿಸಬೇಡ !

**ಮನಸಾ:**—ಓಹೊ, ನನಗೆ ಹೊಳೆಯಿತು ! ನಿಮ್ಮ ಸ್ಥಿತಿಯನ್ನು ನೋಡುತ್ತಿರಲು ನಿಮಗೆ ಆ ಕಾರಣವು ಗೊತ್ತಿಲ್ಲವೆಂಬುದು ಸ್ಪಷ್ಟವಾಗುತ್ತಿದೆ !

**ಧನ**:—ಹೀಗಲ್ಲ. ಕಾರಣವು ಗೊತ್ತಿದೆ. ಆದರೆ ಹೇಳಲಾರೆವು.

**ಮನ**:—ನಿಶ್ಚಯವಾಗಿಯೂ ನಾನು ಕಾರಣವನ್ನು ಬಲ್ಲೆನು ! ಆದರೆ ನಿಶ್ಚಯವಾಗಿಯೂ ಕಾರಣವನ್ನು ಹೇಳಲಾರೆ !

**ಮನಸಾ**:—ನೀವು ಸುಳ್ಳು ಹೇಳುತ್ತಿರುವಿರಿ ! ನಿಶ್ಚಯವಾಗಿಯೂ ನೀವು ಆಕಾರಣವನ್ನರಿಯರಿ ! ಅಂತೆಯೇ ಹೀಗೆ ಹಾರಿಸಿಕೊಂಡು ಮಾತಾಡುತ್ತಿರುವಿರಿ !

**ಧನ**:—ನಿಶ್ಚಯವಾಗಿಯೂ ಬಲ್ಲೆನು !

**ಮನ**:—ಆದರೆ ಹೇಳಲಿಕ್ಕೆ ಬಾರದಾಗಿದೆ !

**ಮನಸಾ**:—ಒಳ್ಳೇ ಬುದ್ಧಿವಂತರಿರುವಿರಿ ನೀವು ! ಗೊತ್ತಿದ್ದ ಕಾರಣವನ್ನು ಒಡನುಡಿಯಲಿಕ್ಕಾಗದೆ ? ಸಾಮಾನ್ಯ ಅಬಲೆಯು ನಾನು. ಆ ಕಾರಣವನ್ನು ಕೇಳಿ ಕೊಂಡು ನಾನು ಆವುದೊಂದು ಮಹತ್ಕಾರ್ಯಮಾಡತಕ್ಕವಳೆ? ನನ್ನಂತಹ ಕೋಮಲೆಯ ಮುಂದೆ ಕಾರಣವನ್ನುಸಿರಲಿಕ್ಕೆ ಹಿಂದೆಗೆಯುತ್ತಿರುವಿರೆಂಬಬಳಿಕ ನಿಮಗೆ ಆ ಕಾರಣವು ಸ್ವಲ್ಪ ಸಹ ಗೊತ್ತಿಲ್ಲ ! ಅಭಿಮಾನಕ್ಕೊಳಗಾದ ನೀವು ಮನ ಬಂದಂತೆ ಮಾತಾಡುತ್ತಿರುವಿರಿ ಮಾತ್ರ ! ನನಗೆ ನಿಮ್ಮ ಇಂಗಿತವು ಹೊಳೆಯದೆಂದು ತಿಳಿಯಬೇಡಿರಿ ! ನಿಮ್ಮ ಶಕ್ತಿಯೆಷ್ಟೆಂಬುದು ನನಗೆ ಗೊತ್ತಾಗಿ ಹೋಗಿದೆ! ನಿಮಗೆ ಕಾರಣವು ಗೊತ್ತಿಲ್ಲ. ಅಂದಬಳಿಕ ಅದನ್ನು ನನಗೆ ಹೇಳುವದು ಹೇಗೆ ?

**ಧನ**:—ನೀನು ಸಿಕ್ಕಸಿಕ್ಕ ಹಾಗೆ ಮಾತಾಡಿ ನನ್ನನ್ನು ಸಿಟ್ಟಿಗೆಬ್ಬಿಸಬೇಡ !

**ಮನ**:—ಗೌಳಿಗಿತ್ತಿ ಬಾಯಿಯನ್ನು ಬಿಗಿದಿರಿಸು. ನೀನು ಮನಬಂದಂತೆ ಮಾತಾಡಿದರೆ, ಈ ಮನೇಶ್ವರನು ಸುಮ್ಮನೆ ಸಹಿಸಿಕೊಳ್ಳತಕ್ಕವನಲ್ಲ !

**ಮನಸಾ**:— ಮಾತಿನ ಬಂಟರೆ, ನಿಮ್ಮ ಬಿಂಕದ ಮಾತುಗಳಿಂದ ಮೋಸ ಗೊಳ್ಳುವವಳು ನಾನಲ್ಲ ! ಕಾರಣವು ಗೊತ್ತಿದ್ದರೆ, ನೀವಿದುವರೆಗೆ ಹೀಗೆ ಪಂಟು ಬಡೆಯುತ್ತಿದ್ದಿರಾ? ( ಧನೇಶ್ವರನ ಹತ್ತಿರ ಹೋಗಿ, ಅವನ ಮೋರೆಯನ್ನು ದಿಟ್ಟಿಸಿ ನೋಡಿ ) ಇವನು ಕಾರಣವನ್ನು ಕೆಲಮಟ್ಟಿಗೆ ಅರಿತಿರುವಂತೆ ಕಾಣು ತ್ತಿದೆ. ಆದರೆ ಮನೇಶ್ವರನಿಗೆ ಕಾರಣವು ಎಳ್ಳಷ್ಟು ಸಹ ಗೊತ್ತಿಲ್ಲ ! ( ಮನೇಶ್ವ ರನ ಹತ್ತಿರ ಬಂದು ಅವನ ಮುಖವನ್ನು ನಿರೀಕ್ಷಿಸಿ ) ಅಲ್ಲ, ನಾನು ತಪ್ಪಿದೆನು. ಆ ಕಾರಣವು ಇವನಿಗೆ ಗೊತ್ತಿರುವಂತೆ ತೋರುತ್ತಿದೆ. ಧನೇಶ್ವರನು ಕಾರಣವನ್ನು ಎಷ್ಟು ಮಾತ್ರಕ್ಕು ಅರಿಯನು !

ಧನ:—ಏನು, ನನಗೆ ಆ ಕಾರಣವು ಗೊತ್ತಿಲ್ಲವೆ?

ಮನ:—ನಾನು ಆ ಕಾರಣವನ್ನರಿಯುವವನೆ?

ಧನ:—ನನಗೆ ಆ ಕಾರಣವನ್ನು ಹೇಳಲಿಕ್ಕೆ ಬಾರದೆ?

ಮನಸಾ:—ಬರಿ ಮಾತುಗಳೇಕೆ? ಹೇಳಿರಿ. ಪರೀಕ್ಷೆಯಾಗಿ ಹೋಗಲಿ

ಧನ:—ಆಗಲಿ. ಪರೀಕ್ಷೆಯು ನಡೆಯಲಿ!

ಮನ:—ನಾನು ಪರೀಕ್ಷೆಗೆ ಸಿದ್ಧನಾಗಿದ್ದೇನೆ!

ಧನ:—ಗೌಳಿಗಿತ್ತಿಯೆ, ಹೀಗೆ ಬಾ. ನಾನು ಮೊದಲು ಹೇಳುವೆನು. ಕೇಳಿಕೊಳ್ಳು.

ಮನ:—ಬೇಡ, ಇಲ್ಲಿಯೆ ನಿಲ್ಲು (ಕೈ ಹಿಡಿದೆಳೆದು) ನಾನು ಮೊದಲು ಹೇಳುವೆನು. ನೀನು ಕೇಳಿಕೊಳ್ಳಲಿಕ್ಕೇ ಬೇಕು!

ಮನಸಾ:—ಹೀಗೆ ಮೈಮುಟ್ಟಿ ಕೈಮುಟ್ಟಿ ಬರಬೇಡಿರಿ! ಬೇಕಾದವರು ಮೊದಲು ಹೇಳಿರಿ. ನಾನು ಕೇಳಿಕೊಳ್ಳಲಿಕ್ಕೆ ಸಿದ್ಧಳಾಗಿಯೆ ನಿಂತಿರುವೆನು.

ಧನ ಮನರು– (ಒಮ್ಮೆಲೆ) ಭಗವಾನ್ ಬ್ರಹ್ಮದೇವನು ಧನ್ವಂತರಿ ಗುರುಗಳಿಗೆ ಶಾಪ ಎತ್ತಿರುವುದೇನಂದರೆ, ಶನಿವಾರದ ಅಮಾವಾಸ್ಯೆಯಲ್ಲಿ ಆಶ್ಲೇಷಾ ನಕ್ಷತ್ರದಲ್ಲಿ ಸರ್ಪದಂಶನದಿಂದ ಸಾಯುವೆ. (ಇಬ್ಬರೂ ತೇಕ ಹತ್ತಿದರು.)

ಧನ:— ಈ ವಿಷವೇಳೆಯಲ್ಲಿ ಗುರುಗಳಿಗೆ ಹಾವು ಕಚ್ಚಿದರೆ, ಮಂತ್ರ, ಔಷಧ ಮೊದಲಾದ ಉಪಾಯಗಳಿಂದ ಏನೂ ಪ್ರಯೋಜನವಾಗುವದಿಲ್ಲ.

ಮನ:—ಈ ವಿಷವೇಳೆಯೊಂದು ದಾಟಿದರೆ, ಗುರುಗಳಿಗೆ ಮರಣವಿಲ್ಲ.

ಮನಸಾ:— ಇಂದು ಆ ವಿಷವೇಳೆಯಿದೆಯೇನು?

ಧನ:—ಆ ವಿಷವೇಳೆಯೆಂದೇ ಗುರುಗಳು ಮಂತ್ರಪೂತವಾದ ಕೋಣೆಯಲ್ಲಿ ಅಡಗಿರುವರು.

ಮನ:—ಇಲ್ಲವಾದರೆ, ಅವರು ಹೀಗೆ ಎಂದೂ ಅಡಗಿರುವವರಲ್ಲ!

ಧನ:—ಅಯ್ಯೊ, ಹೇಳಬಾರದ್ದನ್ನು ಹೇಳಿಬಿಟ್ಟೆನಲ್ಲ!

ಮನ:—ನಾನೂ ತಪ್ಪಿದೆನು! ಏನಾದರೂ ಈ ಗೌಪ್ಯವನ್ನು ಹೊರಗೆ ಹಾಕತಕ್ಕದ್ದಿದ್ದಿಲ್ಲ!

ಮನಸಾ:—ಏಕೆ ಹೀಗೆ ಪಶ್ಚಾತ್ತಾಪಪಡುವಿರಿ? ನನ್ನ ಮುಂದೆ ಹೇಳಿದರೇನಾಯಿತು?

**ಧನ:**— ಗೌಳಿಗಿತ್ತಿ, ನೀನು ದಯವಿರಿಸಿ ಈ ಮಾತನ್ನು ಯಾರ ಮುಂದೆಯೂ ಹೇಳಬೇಡ !

**ಮನ:**—ಸುಂದರಿ, ನಾನು ನಿನ್ನ ಕಾಲ ಹಿಡಕೊಳ್ಳುವೆನು! ಈ ಮಾತನ್ನು ಅನ್ಯರ ಕಿವಿಗೆ ಮುಟ್ಟಿಸಬೇಡ!

**ಮನಸಾ:**—ಛೀ, ಹೇಳಿದ್ದುಂಟೆ? ನೀವು ಕಿಂಚಿನ್ಮಾತ್ರವೂ ಹಳಹಳಿಸುವ ಕಾರಣವಿಲ್ಲ. ಧನ್ವಂತರಿ ಮಹಾರಾಜರು ನಿಮಗೆ ಹೇಗೆ ಗುರುಗಳೋ ಹಾಗೆ ನನಗೂ ಗುರುಗಳು. ನಾನು ಗುರುಗಳಿಗೆ ಅನಿಷ್ಟ ಒದಗಲಿ ಎಂದು ಆಶಿಸುವ ಸಂಭವವಿದೆಯೆ? ನನ್ನ ಪ್ರಾಣಹೋದರೂ ಸಹ, ನಾನು ಗೌಪ್ಯವನ್ನು ಬಹಿರಂಗಪಡಿಸುವವಳಲ್ಲ! ನೀವು ನಿಶ್ಚಿಂತರಾಗಿರಿ!

**ಧನ:**—ಮಹನೀಯಳೆ, ನಿನ್ನ ಆಶ್ವಾಸನ ವಾಣಿಯನ್ನು ಕೇಳಿ ನನಗೆ ಆನಂದವಾಯಿತು !

**ಮನ:**—ಮಾತಿನ ಭರದಲ್ಲಿ ಆಡಬಾರದ್ದನ್ನು ಆಡಿ ಹಳಹಳಿಸುತ್ತಿದ್ದೆನು. ನಿನ್ನ ಮಾತಿನಿಂದ ಆ ಹಳಹಳಿಯು ಅಳಿದು ಹೋಗಿ, ಪರಮಾನಂದಭರಿತನಾಗಿರುವೆನು.

**ಮನಸಾ:**—ಸ್ವಾಮಿ, ನೀವು ಆನಂದಭರಿತರಾದಿರಿ. ಆದರೆ ನನ್ನ ಗತಿಯೇನು ?

**ಧನ:**—ನಿನ್ನ ಗತಿಗಾಣಿಸಲಿಕ್ಕೆ ನಾನಿರುವೆನು! ಚಿಂತಿಸದಿರು!

**ಮನ:**—ನಾನಿರುವಾಗ ನೀನು ಹೆದರುವ ಕಾರಣವಿಲ್ಲ! ನಾನು ನಿನ ಗೋಸುಗ ಎಂತಹ ಕೆಲಸವನ್ನಾದರೂ ಮಾಡಬಲ್ಲೆ!

**ಮನಸಾ:**—ಬಹದ್ದೂರರೆ, ನಾನು ಘೋರ ಸಂಕಟದಲ್ಲಿ ಸಿಕ್ಕಿರುವೆನು. ನನ್ನನ್ನು ಈ ಸಂಕಟದಿಂದ ಪಾರುಮಾಡುವರಾರು ?

**ಧನ:**—ಆ ಸಂಕಟವಾವುದೆಂಬದನ್ನು ಹೇಳು.

**ಮನ:**— ಅದು ಬಹುತರ ಸರ್ಪಕ್ಕೆ ಸಂಬಂಧಿಸಿದ್ದಾಗಿರಬೇಕು.

**ಮನಸಾ:**—ಅಹುದು ಸ್ವಾಮಿ, ನಾನು ಒಂದು ಸರ್ಪದಿಂದ ಅತಿಶಯ ಭಯಗೊಂಡಿದ್ದೇನೆ. ಅದರ ಪಿಡುಗಿನಿಂದ ಹೇಗೆ ಪಾರಾಗಬೇಕೆಂಬುದನ್ನು

ಅರಿಯದವಳಾಗಿ ಕಂಗೆಟ್ಟು ಹೋಗಿದ್ದೇನೆ. ಅಪ್ಪಯ್ಯಾ, ಆ ಸರ್ಪದ ಆಟವನ್ನು ನೆನಿಸಿಕೊಂಡರೆ, ಮೈಯೆಲ್ಲವೂ ಗದಗುಟ್ಟಿ ನಡುಗಹತ್ತುವದು!

**ಧನ:**—ನಡುಗದಂತೆ ನಾನು ನಿನ್ನನ್ನು ಗಟ್ಟಿಯಾಗಿ ಹಿಡಿದುಕೊಳ್ಳುವೆನು.

**ಮನ:**—ಉರಿಮಾಡಿ ಚನ್ನಾಗಿ ಕಾಸುವೆನು. ಅಂದರೆ ನಿನ್ನ ನಡುಗು ತಾನೇ ತಾನಾಗಿ ಹೋಗಿ ಬಿಡುವದು.

**ಮನಸಾ:**—(ಸರಿದು ನಿಂತು) ಬೇಡ. ನೀವು ಈಗ ಯಾವ ಉಪಾಯವನ್ನು ಮಾಡುವುದೂ ಬೇಡ. ಮೊದಲು ನಾನು ಹೇಳುವ ಆ ಭಯಾನಕ ಸಂಗತಿಯನ್ನು ಕೇಳಿಕೊಳ್ಳಿರಿ. ಬಳಿಕ ನೀವೂ ನನ್ನಂತೆಯೆ ಭಯಕಂಪಿತರಾಗದಿರಲಾರಿರಿ.

**ಧನ:**— ಆಗಲಿ, ಹೇಳು.

**ಮನ:**—ಸೊಟ್ಟ ಹಾವಿನ ಸುದ್ದಿಯಿಂದ ಭಯುಗೊಳ್ಳುವದೆ? ಗದಗದ ನಡುಗುವನೇ? ಎಂದಿಗೂ ಆಗದು!

**ಮನಸಾ:**—ಮೀಸೆಹೊತ್ತ ಗಂಡುಸರಾದ ನೀವು ಒಂದು ವೇಳೆ ಹೆದರದಿದ್ದರೂ ಇರಬಹುದು! ಆದರೆ ಅಬಲೆಯಾದ ನಾನು ಆ ನೋಟವನ್ನು ನೋಡಿ ಭಯಭೀತಳಾಗಿ ಹೋಗಿರುವೆನು. ಹೇಳುವೆನು, ಕೇಳಿರಿ. ನಮ್ಮ ಮನೆಯಲ್ಲಿ ದೊಡ್ಡದೊಂದು ಎಮ್ಮೆಯಿದೆ. ಅದು ದಿನಾಲು ಎಂಟು ಚರಿಗೆ ಹಾಲು ಹಿಂಡುತ್ತಿತ್ತು. ಆದರೆ ಈಗ್ಗೆ ಎಂಟು ದಿನಗಳಿಂದ ಹಿಂಡದಾಗಿ ಹೋಗಿದೆ. ಹೀಗೇಕಾಯಿತೆಂಬದನ್ನು ಪರೀಕ್ಷಿಸುವ ಸಂಕಲ್ಪದಿಂದ ನಾನು ಒಂದುದಿನ ಆ ಎಮ್ಮೆಯ ಮೇಲೆ ಸದಾ ದೃಷ್ಟಿಯಿರಿಸಿದ್ದೆನು. ಅಂದಿನ ದಿನದ ರಾತ್ರಿಯ ನೋಟವನ್ನು ಕಂಡು ಗಾಬರಿಯಾಗಿ ಹೋದೆನು. ಅಪ್ಪಯ್ಯಾ, ಎಂತಹ ಭಯಂಕರ ದೃಶ್ಯವದು!

**ಧನ:**— ಭಯುಗೊಳ್ಳದಿರು. ಮುಂದೇನಾಯಿತೆಂಬದನ್ನು ಹೇಳು.

**ಮನ:**— ಇಲ್ಲಿ ನಿನ್ನ ಸಹಾಯಕರು ನಾವಿರುವಾಗ ಹೆದರುವ ಕಾರಣವಿಲ್ಲ. ನಿರ್ಭಯದಿಂದ ನುಡಿ.

**ಮನಸಾ:**—ನಾನು ಯಾವ ನೋಟವನ್ನು ನೋಡಿರಬಹುದೆಂಬದರ ಊಹೆಯು ನಿಮಗಾಗದು. ಅಂತೆಯೆ ನೀವು ಹೀಗೆ ಮಾತಾಡುತ್ತಿರುವಿರಿ. ನೀವು ಮುಂದಿನ ಸಂಗತಿಯನ್ನು ಕೇಳಿಕೊಂಡರೆ, ವಿಸ್ಮಯದಿಂದಲೂ ಭಯದಿಂದಲೂ

ಬಾಯುಮೇಲೆ ಕೈಯಿಟ್ಟುಕೊಳ್ಳದಿರಲಾರಿರಿ! ಬಹು ಭಯಂಕರವಾದ ಸರ್ಪ. ಸುಮಾರು ಎರಡು ಮಾರು ಉದ್ದವಾಗಿರಬಹುದು. ಆ ಸರ್ಪವು ಎಮ್ಮೆಗೆ ಸುತ್ತುಹಾಕಿದ್ದು, ಹಾಲು ಕುಡಿಯುತ್ತಿದ್ದುದನ್ನು ನಾನು ಕಂಡೆನು!

**ಧನ:**— ಸರ್ಪವು ಎಮ್ಮೆಯ ಮೊಲೆಗಳಲ್ಲಿಯ ಹಾಲು ಕುಡಿಯುತ್ತಿತ್ತೆ?

**ಮನ:**—ಒಳ್ಳೇ ವಿಚಿತ್ರಸಂಗತಿಯಿದು!

**ಮನಸಾ:**—ವಿಚಿತ್ರತೆಯು ಇಷ್ಟರಿಂದಲೆ ಕೊನೆಗಾಣಲಿಲ್ಲ! ಇನ್ನೂ ಮುಂದೆ ಹೇಳುವದನ್ನು ಕೇಳಿಕೊಳ್ಳಿರಿ. ಆ ಭಯಂಕರ ಹಾವನ್ನೂ ಅದರ ವಿಚಿತ್ರ ಕೃತಿಯನ್ನೂ ನೋಡಿ ನಾನು ಸ್ತಬ್ಧಳಾಗಿಹೋದೆನು. ಕೆಲಹೊತ್ತಿನಮೇಲೆ ಆ ಹಾವು ತನ್ನ ಹೊಟ್ಟೆಯನ್ನು ತುಂಬಿಕೊಂಡು ಅದೃಶ್ಯವಾಗಿ ಹೋಯಿತು. ಬಳಿಕ ನನಗೆ ಮಾತಾಡುವ ಧೈರ್ಯವುಂಟಾಯಿತು. ನಾನು ಮನೆಯವರನ್ನು ಎಬ್ಬಿಸಿದೆನು. ಆದರೆ ಆ ಹಾವು ಅಂದು ಮತ್ತೆ ಕಣ್ಣಿಗೆ ಬೀಳಲಿಲ್ಲ. ಹೀಗೆ ದಿನಾಲು ಆ ಹಾವು ಯಾವ ಮಾಯದಿಂದಲೊ ಬಂದು ಎಮ್ಮೆಯ ಹಾಲನ್ನೆಲ್ಲ ಕುಡಿದು ಹೋಗುತ್ತಿತ್ತು. ಆದರೆ—

**ಧನ:**—ಏಕೆ ಸುಮ್ಮನಾದೆಯಲ್ಲ?

**ಮನ:**—ಮುಂದೇನಾಯಿತು?

**ಮನಸಾ:**—ಆ ವಿಚಿತ್ರ ಹಾವು ನಿನ್ನಿನ ದಿವಸ ನನಗೆ ಗಂಟುಬಿದ್ದಿತು! ನಿನ್ನಿನ ರಾತ್ರಿಯಲ್ಲಿ ನಾನು ಮಲಗಿರುವಾಗ ಅದು ಸದ್ದಿಲ್ಲದೆ ಬಂದು, ನನ್ನ ಹೆಡಮುರಿಗೆಯು ಕಟ್ಟಿತು. ಹಾಲೆಲ್ಲವನ್ನು ಕುಡಿದು ಹೋಯಿತು. ನಿದ್ರೆಯಿಂದೆಚ್ಚೆತ್ತ ನಾನು ಕಣ್ತೆರೆದು ನೋಡಿ ಅತಿಶಯ ಭಯದಿಂದಲೂ ವಿಸ್ಮಯಾತಿರೇಕದಿಂದಲೂ ಮೆಯ್ಮರೆದು ಹೋದೆನು. ಪ್ರತೀಕಾರವನ್ನು ಮಾಡಲಿಕ್ಕೆ ನನ್ನಲ್ಲಿ ತ್ರಾಣವೆ ಇರಲಿಲ್ಲ. ಹಾವು ಅದೃಶ್ಯವಾಗಿ ಹೋದಬಳಿಕ ಮೊಲೆಯಲ್ಲಿ ಒಂದು ಹನಿ ಸಹ ಹಾಲಿರಲಿಲ್ಲ. ನನ್ನ ಎಳೆ ಮಗು ಮೊಲೆಗಳನ್ನು ಹಿಂಡಿಹಿಂಡಿ ಹಾಲು ಕಾಣದೆ, ಜೀವಾ ತಿಂದು ಬಿಟ್ಟಿತು. ದಿನಾಲು ಹೀಗೆ ನಡೆಯಹತ್ತಿದರೆ, ಮುಂದೆ ನನ್ನ ಗತಿಯೇನು? ಕೂಸಿನ ಅವಸ್ಥೆಯೇನು? ಎಂಬ ದಾರುಣವಾದ ಚಿಂತೆಗೊಳಗಾಗಿದ್ದೇನೆ! ಮತ್ತೊಂದು ಮಾತೆಂದರೆ, ನನ್ನ ಮೊಲೆಯ ಹಾಲಿನಿಂದ ಆ ಹಾವಿಗೆ ತೃಪ್ತಿಯಾಗದಿದ್ದರೆ, ಅದು ನನ್ನ ಜೀವ ತಕ್ಕೊಳ್ಳಲಿಕ್ಕೆ ಹಿಂದೆಗೆಯದು! ಇದೇನು ಸಾಮಾನ್ಯ ವಿಪತ್ತೆ?

**ಧನ:**—ಒಳ್ಳೇ ರಸಿಕ ಸರ್ಪ !

**ಮನ:**—ಅಂತೆಯೇ ಸುಂದರಿಯಾದ ಗೌಳಿಗಿತ್ತಿಯನ್ನು ಹುಡುಕಿ ಕೊಂಡಿದೆ !

**ಮನಸಾ:**—ಸ್ವಾಮಿ, ನಾನು ಹೇಳಿದ್ದು ನಿಮಗೆ ಚೇಷ್ಟೆಯಾಗಿ ಕಂಡಿ ತೇನು ? ನನ್ನ ಈ ಮಹತ್ಸಂಕಟದ ಸುದ್ದಿಯನ್ನು ಕೇಳಿ, ನಿಮಗೆ ಕನಿಕರವಾಗುವ ದಿಲ್ಲವೇ ?

**ಧನ:**—ಚೇಷ್ಟೆಯ ಮಾತೆಂದು ಅಂದವರಾರು ?

**ಮನ:**—ನಮಗೆ ದಯವೇನೊ ಬರುತ್ತಿದೆ. ಆದರೆ ಮಾಡಬೇಕೇನು ? ಬುದ್ಧಿಶಾಲಿಯಾದ ಆ ಸರ್ಪವು ಉತ್ತಮೋತ್ತಮ ವಸ್ತುವನ್ನು ಹುಡುಕಿಕೊಂಡಿದೆ ! ಉಪಭೋಗ ತೆಗೆದುಕೊಳ್ಳುತ್ತಲಿದೆ ! ಅದನ್ನು ವಂಚಿಸುವದು ಹೇಗೆ ?

**ಮನಸಾ:**—ನನ್ನ ಕೂಸು ಹಾಲುಗಾಣದೆ, ಸತ್ತುಹೋಗಬೇಕೆ ? ನಾನು ಹಾವಿನ ಕಡತದಿಂದ ಮಡಿಯಬೇಕೆ ?

**ಧನ:**—ಹೀಗೆಂದಿಗೂ ಆಗದು ! ಗೌಳಿಗರ ಮನೆಯ ಹುಡುಗರಿಗೆ ಹಾಲಿನ ಕೊರತೆಯೆ ? ನಿನ್ನ ಮೊಲೆತಿಂದು ಪುಷ್ಟವಾದ ಆ ಹಾವು ನಿನನ್ನು ಕಚ್ಚೀತೆ ?

**ಮನ:**—ಸುಂದರಿ ನೀನು ಹೆದರದಿರು. ನಿನ್ನ ರೂಪವೈಭವವನ್ನು ನೋಡಿ ಆ ಹಾವು ಉಪಭೋಗಕ್ಕಾಗಿ ನಿನ್ನನ್ನಾಶ್ರಯಿಸಿದೆ. ಮನದಣಿತಮೇಲೆ ತಾನೇ ತಾನಾಗಿ ನಿನ್ನನ್ನು ಬಿಟ್ಟುಕೊಡುವದು.

**ಮನಸಾ:**— ಅರಣ್ಯಪಂಡಿತರು ನೀವು ! ಆ ಹಾವು ನಿಮಗೆ ಗಂಟು ಬಿದ್ದಿದ್ದರೆ, ಹೀಗೆ ಮಾತಾಡುವದು ಸಾಧ್ಯವಿತ್ತೆ ? ನಾನು ಸಂಕಟಕ್ಕೊಳಗಾದರೆ ನಿಮಗೇನು ?

**ಧನ:**—ಆ ಹಾವು ನಮ್ಮ ಹತ್ತಿರ ಬರಲಿಕ್ಕೆ ನಮಗೆ ಸ್ತನಗಳಿವೆಯೆ ? ಹಾಲಿದೆಯೆ ?

**ಮನ:**—ಸುಂದರಿ, ನಾನೊಂದು ಉಪಾಯವನ್ನು ಹೇಳಿಕೊಡುವೆನು. ನೀನು ಹೀಗೆ ವರ್ತಿಸಿದರೆ ಆ ಹಾವಿನ ಕಚಾಟನಿಂದ ಪಾರಾಗುವೆ. ಕೆಲವು ದಿವಸ

ನೀನು ನಮ್ಮ ಮನೆಯಲ್ಲಿದ್ದು ಬಿಡು. ಆ ಹಾವು ಹುಡುಕಿ ನಿನ್ನನ್ನು ಕಾಣದೆ ನಿರಾಶವಾಗಿ ನಿನ್ನ ಹಂಬಲವನ್ನು ಬಿಟ್ಟುಬಿಡುವದು. ಒಂದುವೇಳೆ ಅದು ನಿನ್ನನ್ನು ಹುಡುಕಿಕೊಂಡು ನಮ್ಮ ಮನೆಗೆ ಬಂದರೂ, ನಾನು ಸದಾ ಜಾಗ್ರತನಾಗಿದ್ದು ಅದು ನಿನ್ನ ಮೈಮುಟ್ಟದಂತೆ ಕಾಯ್ದುಕೊಂಡಿರುವೆನು !

**ಮನಸಾ:**—ಮನೆತನದ ಹೆಣ್ಣುಮಗಳು ನಾನು ! ನೀವು ಹೀಗೆ ಮಾತಾಡುವದು ಸರಿಯೆ ?

**ಧನ:**—ನಮಗೆ ಏನು ಮಾಡೆಂದು ಹೇಳುವೆ ?

**ಮನ:**—ನೀನು ಹೇಳಿದಂತೆ ಕೇಳಲಿಕ್ಕೆ ನಾನು ಒಪ್ಪಿಕೊಳ್ಳುತ್ತೇನೆ.

**ಮನಸಾ:**—ಗುರುಗಳ ದರ್ಶನವಾಗಿದ್ದರೆ, ನೆಟ್ಟಗಾಗುತ್ತಿತ್ತು. ಅವರು ಹಾವಿನ ಹಾವಳಿಯು ನನಗೆ ತಟ್ಟದಂತೆ ಯಂತ್ರಮಾಡಿಕೊಡಬಹುದಾಗಿತ್ತು. ಆದರೆ ನಿಮ್ಮ ಮಾತು ಕೇಳುತ್ತಿರಲು, ಇಂದು ನನಗೆ ಅವರ ದರ್ಶನವಾಗುವದು ಅಸಂಭವವೇ ಸರಿ ! ಈಗ ನೀವು ನನ್ನದೊಂದು ಕೆಲಸಮಾಡಿರಿ. ಗುರುಗಳ ದರ್ಶನಕ್ಕೆ ಬರಗೈಯಿಂದ ಹೊರಡಬಾರದೆಂದು ಶಾಸ್ತ್ರವಚನವುಂಟು. ನಾನು ಗುರುಗಳಿಗೆ ಸಮರ್ಪಿಸಲಿಕ್ಕೆ ಕೆನೆಮೊಸರಗಡಿಗೆಯನ್ನು ತಂದಿದ್ದೆನು. ಈ ಮಡಿಕೆಯನ್ನು ತಕ್ಕೊಳ್ಳಿರಿ. ಗುರುಗಳಿಗೆ ಮುಟ್ಟುವಂತೆ ಮಾಡಿರಿ. ( ಕೊಡುವಳು ).

**ಧನ:**—ಇದು ತೀರ ಹಗುರಾದ ಕೆಲಸ. ಸಹಜವಾಗಿ ಮಾಡುವೆನು.

**ಮನ:**—ಗೌಳಿಗಿತ್ತಿ, ನೀನು ನಾಳಿನ ದಿವಸ ಗುರುಗಳ ಬಳಿಗೆ ಬಾ. ನಾನು ನಿನಗೆ ಅವರ ದರ್ಶನ ಮಾಡಿಸುವೆನು.

**ಮನಸಾ:**—ಸ್ವಾಮಿ, ನೀವು ಈ ಗಡಿಗೆಯ ಬಾಯಿಯನ್ನು ತೆರೆಯಲಾಗದು. ರುಚಿನೋಡಿ ಎಂಜಲ ಮಾಡಲಾಗದು. ಈ ಮಡಿಕೆಯನ್ನು ಹೀಗೆಯೇ ಒಯ್ದು ಗುರುಗಳ ಸ್ವಾಧೀನಪಡಿಸಲಿಕ್ಕೆ ಬೇಕು. ಅಂದರೇನೇ ನನಗೆ ದಾನದ ಪುಣ್ಯವು ಲಭಿಸುವದು.

**ಧನ:**—ನೀನು ಇದರ ಚಿಂತೆಯನ್ನು ಬಿಟ್ಟುಕೊಡು.

**ಮನ:**—ಗುರುಗಳಿಗೆ ಬಂದ ಕಾಣಿಕೆಯನ್ನು ಗುರುಗಳ ಅಪ್ಪಣೆಯಿಲ್ಲದೆ ನಾವು ಸೇವಿಸತಕ್ಕವರಲ್ಲ.

**ಮನಸಾ:**—ಸ್ವಾಮಿ, ತಾವು ಒಳ್ಳೆ ಧಾರ್ಮಿಕರು. ಪರಮ ಗುರುಭಕ್ತರು. ಅಂತೆಯೆ ನಾನು ವಿಶ್ವಾಸದಿಂದ ಈ ಮೊಸರ ಮಡಿಕೆಯನ್ನು ನಿಮ್ಮ ಸ್ವಾಧೀನಪಡಿಸಿರುವೆನು. ನಾನು ಹೇಳಿದಂತೆ ಮಾಡಿರಿ. ಅನುಕೂಲತೆ ನೋಡಿಕೊಂಡು ಮತ್ತೊಮ್ಮೆ ಗುರುಗಳ ದರ್ಶನಕ್ಕೆ ಬರುವೆನು. ಆಗ್ಗೆ ನಿಮಗೋಸುಗ ಉತ್ತಮವಾದ ಜೋಮೆಯನ್ನು ತಯಾರಿಸಿ ತರುವೆನು. ಇನ್ನು ನನಗೆ ಅಪ್ಪಣೆಕೊಡಿರಿ. ಹೋಗಿಬರುವೆನು. ( ಹೋಗುವಳು ).

**ಧನ:**—ಮನೇಶ್ವರನೆ,

**ಮನ:**—ಧನೇಶ್ವರನೆ,

**ಧನ:**—ಹೋಗಿಯೆ ಬಿಟ್ಟಳಲ್ಲ !

**ಮನ:**—ಆಕಾಶದಲ್ಲಿ ಮಿಂಚ ಮಿಂಚಿ ಮಾಯವಾದಂತಾಯಿತು !

( ಒಳಮನೆಯಲ್ಲಿ ಅಳುವ ಧ್ವನಿಯಾಗುವದು ).

**ಧನ:**—ತಮ್ಮಾ, ಗುರುಗಳ ಮನೆಯಲ್ಲಿ ಆರೋ ಅಳುತ್ತಿರುವಂತೆ ತೋರುತ್ತಿದೆ !

**ಮನ:**—ಅಣ್ಣಾ, ಅಹುದು. ಕ್ರಂದನವು ಕೇಳಬರುತ್ತಿದೆ. ಯಾರು ಶೋಕಿಸುತ್ತಿರಬಹುದು ?

**ಧನ:**—ಯಾರೆಂಬದು ನನಗೆ ಗೊತ್ತಾಗಲೊಲ್ಲದು. ನಡೆ, ಒಳಗೆ ಹೋಗಿ ನೋಡೋಣ. ( ಭರದಿಂದ ಇಬ್ಬರೂ ಒಳಗೆ ಹೋಗುವರು. ಚಾಂದಸವದಾಗರನ ಸೇವಕನಾದ ನೀಲನು ಇವರನ್ನು ತಡೆಹಾಯುವನು. ಮೂವರು ಬೀಳುವರು. ಕೆಲವು ಹೊತ್ತಿನಮೇಲೆ ಎದ್ದು ನಿಂತು ಪರಸ್ಪರರ ಮುಖನಿರೀಕ್ಷಣೆಮಾಡುವರು. )

**ಧನ:**—ಓಹೋ, ನೀಲನೇನು ? ಏಕೆ ಬಂದಿರುವೆ ? ಹೀಗೆ ರಭಸದಿಂದ ಎಲ್ಲಿಗೆ ಹೊರಟಿರುವೆ ?

**ನೀಲ:**—ಘೋರಸಂಕಟಸಮಯ ! ಅನರ್ಥಪರಂಪರೆಗೆ ಅಳತೆಯಿಲ್ಲದಾಗಿದೆ ! ಉಚ್ಚರಿಸಲಿಕ್ಕೆ ಬಾಯಿ ಏಳದಿದೆ !

**ಧನ:**—ಅಂತಹ ಸಂಕಟವೇನಪ್ಪಾ ?

**ಮನ:**—ವೆಂಕಟರಮಣನನ್ನು ನೆನಸಿದರೆ ಸಂಕಟವು ತಾನೇ ತಾನಾಗಿ ನಾಶವಾಗಿಹೋಗುವದು !

**ನೀಲ:**—ಹುಡಗಾಟಿಕೆಯ ಸಮಯವಿದಲ್ಲ ! ಒಡೆಯರು ಸರ್ಪಗಳನ್ನು ಸಂಹರಿಸುವದಕ್ಕೆ ಕಾಲೀಮಡುವಿನ ಕಡಗೆ ಹೋಗಿದ್ದಾರೆ. ಇತ್ತ ಅರಮನೆಯಲ್ಲಿ ಆರು ಹಾವುಗಳು ಕಾಣಿಸಿಕೊಂಡು ಆರು ಮಂದಿ ರಾಜಪುತ್ರರನ್ನು ಕಚ್ಚಿಬಿಟ್ಟವೆ ! ಸರ್ಪದಂಶನದಿಂದ ರಾಜಪುತ್ರರೆಲ್ಲರು ಮೃತಪಟ್ಟಿದ್ದಾರೆ! ರಾಜ್ಞಿಯರ ಶೋಕಕ್ಕೆ ಪಾರಾವಾರವಿಲ್ಲದಾಗಿದೆ ! ನಾನು ಧನ್ವಂತರಿ ಗುರುಗಳನ್ನು ಕರೆಯಬಂದಿದ್ದೆನು. ಆದರೆ ಗುರುಗಳು ಇಂದು ಮನೆಬಿಟ್ಟು ಹೊರಡತಕ್ಕವರಲ್ಲವೆಂಬ ಸುದ್ದಿಯನ್ನು ಕೇಳಿ, ರಾಣಿಯವರನ್ನೆ ಇಲ್ಲಿಗೆ ಕರೆತಂದಿರುವೆನು. ರಾಣಿಯವರು ಒಳಮನೆಯಲ್ಲಿ ತಮ್ಮ ಪುತ್ರರ ಶವಗಳ ಮುಂದೆ ಕುಳಿತು ಪ್ರಳಾಪಿಸುತ್ತಿರುವರು ! ಆ ದೃಶ್ಯವನ್ನು ನೋಡಿದರೆ, ಕಟುಕನಿಗೂ ದಯೆಯುಂಟಾಗುವಂತಿದೆ! ಮುಂದೆ ಏನಾಗುವದೊ ಏನೊ !

**ಧನ:**—ಇದೇನು ಹೇಳಿದೆಯಪ್ಪಾ ? ಮಹಾರಾಜನ ಆರು ಮಕ್ಕಳೂ ಸರ್ಪದಂಶನದಿಂದ ಸತ್ತಿರುವರೆ ?

**ನೀಲ:**—ಅಹುದು ! ಬೇಕಾದರೆ, ಒಳಗೆ ಹೋಗಿ ನೋಡಿರಿ !

**ಮನ:**—ನೋಡುವುದು ಬೇಡ. ನೀನೇನು ಸುಳ್ಳು ಹೇಳತಕ್ಕವನೆ ? ಆದರೆ ಇಂದು ಗುರುಗಳು ತಾವು ಕುಳಿತಿದ್ದ ಕೋಣೆಯನ್ನು ಬಿಟ್ಟು ಹೊರಬೀಳುವಂತಿಲ್ಲ. ಆ ಕೋಣೆಯೊಳಗೆ ಅನ್ಯರನ್ನು ಕರೆದೊಯ್ಯುವಂತಿಲ್ಲ. ಅಂದಬಳಿಕ ರಾಜಪುತ್ರರ ಪ್ರಾಣರಕ್ಷಣೆಯಾಗುವದು ಹೇಗೆ ?

**ನೀಲ:**—ಹೇಗಾದರೂ ಮಾಡಿ ರಾಜಕುಮಾರರನ್ನು ರಕ್ಷಿಸಲೇಬೇಕು ! ನಿಮಗೇನಾದರೂ ಮಂತ್ರತಂತ್ರಗಳು ಗೊತ್ತಿದ್ದರೆ, ಪ್ರಯತ್ನ ಮಾಡಿ ನೋಡಿರಿ.

**ಧನ:**—ಗುರುಗಳು ನಮಗೆ ಮಂತ್ರತಂತ್ರಗಳನ್ನು ಕಲಿಸಿದ್ದಾರೆ. ಆದರೆ ಆ ಮಂತ್ರತಂತ್ರಗಳನ್ನು ನಾನು ಯಾರ ಮೇಲೂ ಪ್ರಯೋಗಿಸಿದವನಲ್ಲ. ಅಂದಬಳಿಕ ಇಂದಿನ ಅಶುಭವೇಳೆಯಲ್ಲಿ ಅವುಗಳನ್ನು ಪ್ರಯೋಗಿಸುವದು ಹೇಗೆ ?

**ಮನ:**—ಇಂದಿನ ವಾರ, ತಿಥಿ, ನಕ್ಷತ್ರಗಳು ಸರಿಯಾಗಿದ್ದರೆ, ನಾನು ರಾಜಸುತರ ಜೀವವನ್ನು ತಿರುಗಿಸದೆ ಬಿಡುತ್ತಿದ್ದಿಲ್ಲ !

**ನೀಲ:**–ನಿರರ್ಥಕವಾಗಿ ಹರಟೆಕೊಚ್ಚುತ್ತ ನಿಲ್ಲುವ ವೇಳೆಯಿದಲ್ಲ! ರಾಜನಂದನರ ಜೀವಗಳನ್ನು ಬದುಕಿಸಲಿಕ್ಕೆ ನಿಮ್ಮಿಂದಾಗದು. ಈ ಕೆಲಸವು ಧನ್ವಂತರಿ ಗುರುಗಳಿಗೊಬ್ಬರಿಗೆ ಮಾತ್ರ ಸಾಧ್ಯವಾದ್ದು. (ಕಿವಿಗೊಟ್ಟು ಕೇಳಿ) ರಾಜ್ಞಿಯವರ ಅಳುವ ಸ್ವರವೇಕೊ ಕೇಳಲೊಲ್ಲದು. ಬಹುತರ ಅವರು ಮೂರ್ಛಿತರಾಗಿ ಬಿದ್ದಿರಬಹುದು. ನಾನು ಒಳಗೆ ಹೋಗಲಾರೆನು! ಆ ನೋಟವನ್ನು ನೋಡಲಾರೆನು! ಇದ್ದ ಷಟ್ಪುತ್ರರೂ ಏಕಕಾಲಕ್ಕೆ ಸರ್ಪದಂಶನದಿಂದ ಮೃತರಾದುದನ್ನು ನೋಡಿದ ಆ ಜನನಿಯು ಶೋಕಭರವು ಕಲ್ಪನಾತೀತವು! ಆ ಪರಮಾಪಧಿ ಶೋಕದ ಇರವನ್ನು ಅನುಭವಿಕರು ಮಾತ್ರ ತಿಳಿಯಬಲ್ಲರು! ನನ್ನಂತಹ ಅನಭಿಜ್ಞನು ಕೇವಲ ನೋಡುವಿಕೆಯಿಂದ ಹೌಹಾರಿರುವಾಗ, ಆ ಮಾತೆಯ ಸ್ಥಿತಿ ಹೇಗಾಗಿರಬೇಕೆಂಬುದು ಅವರ್ಣನೀಯವು! ಗುರುಗಳು ಈ ಸಂಗತಿಯನ್ನು ಕೇಳಿದರೆಂದರೆ ಸುಮ್ಮನಿರರು. ಅವರು ಮಹಾರಾಜರ ಅನ್ನದಿಂದ ಪೋಷಿತರು. ಮಹಾರಾಜರ ಶಕ್ತಿಯಿಂದ ಸುರಕ್ಷಿತರು. ಇಂತಹ ಅವರು ಮಹಾರಾಜರ ಘೋರ ವಿಪತ್ಪ್ರಸಂಗದಲ್ಲಿ ಸುಮ್ಮನಿದ್ದಾರೆಯೆ? ನೀವು ಅವರಲ್ಲಿರುವರೆಂಬದನ್ನು ಮಾತ್ರ ನನಗೆ ಹೇಳಿಕೊಡಿರಿ. ನಾನು ಅವರ ಬಳಿಗೆ ಹೋಗುವೆನು. ನಡೆದಿದ್ದ ಸಂಗತಿಯನ್ನು ಅವರಿಗೆ ನಿವೇದಿಸುವೆನು. ಅವರು ನಿಮ್ಮಂತೆ ಹೃದಯಹೀನರಾಗಿ ವರ್ತಿಸುವ ಸಂಭವವಿಲ್ಲ. ಹೂ, ಬೇಗನೆ ಹೇಳಿರಿ, ಅವರೆಲ್ಲಿರುವರು?

**ಧನ:**—ಏನಯ್ಯಾ, ನೀನು ಉನ್ಮಾದಗ್ರಸ್ತನಾಗಿರುವಂತೆ ಕಾಣುವೆ!

**ಮನ:**—ಅಲ್ಲದೆ ಮತ್ತೇನು? ನಮ್ಮ ಗುರುಗಳು ಶನಿವಾರದ ಅಮವಾಸ್ಯೆಯ ಆಶ್ಲೇಷಾ ನಕ್ಷತ್ರದಲ್ಲಿ—ತಮ್ಮ ಮರಣವೇಳೆಯಲ್ಲಿ—ಹೊರಗೆ ಬಂದಾರೆಯೆ? ಅವರಿಗೆ ತಮ್ಮ ಜೀವವು ಬೇಡಾಗಿದೆಯೆ? ಎಂತಹ ಹುಚ್ಚನಪ್ಪಾ ನೀನು!

**ನೀಲ:**—ಈಗ ನಾನು ಹುಚ್ಚನೇ ಸರಿ! ಆದರೂ ನೀವು ನನಗೆ ಗುರುಗಳ ವಾಸಸ್ಥಳವನ್ನು ತೋರಿಸಲಿಕ್ಕೆ ಬೇಕು!

**ಧನ:**—ಆಗದು!

**ಮನ:**—ನಾವು ಅವರ ಶಿಷ್ಯರು. ಗುರುಗಳು ಅಡಗಿರುವ ಸ್ಥಳವನ್ನು ತೋರಿ, ಅವರನ್ನು ಮರಣಕ್ಕೆ ಗುರಿಮಾಡಿದ ಮಹಾಪಾತಕಕ್ಕೆ ಗುರಿಯಾಗಬೇಕೆ?

**ಧನ:**—ಏನಯ್ಯಾ, ನಾನೊಂದು ಹಂಚಿಕೆಯ ಹೇಳುವೆನು ಕೇಳು. ಮಹಾರಾಜರು ಬಂದರೆ, ಗುರುಗಳು ನಿರ್ಭಯದಿಂದ ಹೊರಗೆ ಬರಬಹುದಾಗಿದೆ. ಯಾಕಂದರೆ, ಗುರುಗಳು ಸರ್ಪದಂಶನದಿಂದ ಮೃತಪಟ್ಟರೆ, ಮಹಾರಾಜರು ಅವರನ್ನು ಬದುಕಿಸಿಕೊಳ್ಳಬಲ್ಲರು. ಉಳಿದವರಾರಿಂದಲೂ ಈ ಕಾರ್ಯವಾಗು ವಂತಿಲ್ಲ. ಅಂದಬಳಿಕ ಮಹಾರಾಜರು ಬಂದಹೊರತು ಗುರುಗಳು ಅಡಗಿರುವ ಮಂತ್ರಪೂತಕೋಣೆಯಿಂದ ಹೊರಬೀಳುವ ಸಂಭವವಿಲ್ಲವೇ ಇಲ್ಲ !

**ಮನ:**—ಸರಿಯಾದ ಹಂಚಿಕೆ. ನೀನು ಹೋಗಿ ಮಹಾರಾಜರನ್ನು ಕರೆದು ಕೊಂಡುಬಾ !

**ನೀಲ:**—ನಿಷ್ಠುರರೆ, ಮಹಾರಾಜರಿದ್ದರೆ ನಾನು ನಿಮ್ಮ ಹತ್ತರ ಬರುತ್ತಿದ್ದೆನೆ? ಅವರೇ ತಮ್ಮ ಮಕ್ಕಳ ಜೀವಗಳನ್ನುಳಿಸಿಕೊಳ್ಳುತ್ತಿದ್ದಿಲ್ಲವೆ ? ಅವರು ಇಂದು ಇಲ್ಲಿರದಿರುವದರಿಂದಲೇ ನಾನು ಗುರುಗಳನ್ನು ಹುಡುಕಿಕೊಂಡು ಬಂದಿದ್ದೇನೆ. ಹೂ ತಡಮಾಡಬೇಡಿರಿ. ನೀವು ಒಳ್ಳೇ ಮಾತಿನಿಂದ ಗುರುಗಳ ವಾಸಸ್ಥಳವನ್ನು ತೋರದಿದ್ದರೆ, ನಾನು ಬಲಾತ್ಕಾರಮಾಡಿಯಾದರೂ ನಿಮ್ಮಿಂದ ಗುರುಗಳ ಅಡಗಿರುವ ಸ್ಥಳವನ್ನು ತಿಳಿದುಕೊಳ್ಳುವೆನು.

**ಧನ:**—ನೀನು ಏನು ಮಾಡಿದರೂ ನಾವು ಆ ಸ್ಥಳವನ್ನು ನಿನಗೆ ತೋರಿಸಲಾರೆವು !

**ನೀಲ:**—(ಇಬ್ಬರ ಕಿವಿಹಿಡಿದೆಳೆದು) ಹೃದಯಹೀನರೆ, ಸುಮ್ಮನೆ ಆ ತಾಣವನ್ನು ತೋರಿರಿ. ಇಲ್ಲದಿದ್ದರೆ ನಿಮ್ಮ ಗತಿ ನೆಟ್ಟಗಾಗದು !

**ಧನ–ಮನರು:**—ನಮ್ಮನ್ನು ಬೆದರಿಸಬಂದಿರುವೆಯಾ ? ನಾವು ನಿನಗೆ ಹೆದರತಕ್ಕವರಲ್ಲ. ನಡೆಯತ್ತ! (ಕೊಸರಿಕೊಂಡು ನಿಲ್ಲುವರು).

**ನೀಲ:**—ಅಯ್ಯೋ ಕಟುಕರೆ, ನಿಮಗೆ ದಯುಂಟಾಗಲೊಲ್ಲದೆ? ಮಹಾರಾಜರ ಆರೂ ಮಕ್ಕಳು ಒಂದೇ ದಿನದಲ್ಲಿ ಹೀಗೆ ಸರ್ಪದಂಶನದಿಂದ ಮಡಿದಿರುವದನ್ನು ಕೇಳಿಯೂ ನಿಮಗೆ ಕನಿಕರವುಂಟಾಗಲೊಲ್ಲದೆ ? ನಿಮ್ಮಂತೆ ಗುರಗಳು ಕಟುಕರಾಗುವ ಸಂಭವವಿಲ್ಲ, ಅವರು ಮಹನೀಯರು. ಅವರಿಗೆ ತಮ್ಮ ಜೀವಕ್ಕಿಂತಲೂ ಕರ್ತವ್ಯವು ಹೆಚ್ಚಿನದು ! ಅವರು ಕರ್ತವ್ಯಪಾಲನೆಗಾಗಿ ತಮ್ಮ ಜೀವವನ್ನು ಉಪೇಕ್ಷಿಸಿಯೂ ಅರಸುಮಕ್ಕಳ ಜೀವರಕ್ಷಣೆಗೆ ಧಾವಿಸದಿರರು ! ಪ್ರಾಚೀನ ಕಾಲದಲ್ಲಿ

ದಧೀಚಿಋಷಿಯು ದೇವತೆಗಳ ಹಿತಕ್ಕಾಗಿಯೂ ದಾನವರ ನಾಶಕ್ಕಾಗಿಯೂ–ಶಿಷ್ಟಪರಿಪಾಲನೆ ದುಷ್ಟರಕ್ಷಣೆಗಳಿಗಾಗಿ–ತಮ್ಮ ಅಸ್ಥಿಗಳನ್ನು ನೀಡಿದಂತೆ, ಧನ್ವಂತರಿ ಗುರುಗಳು ಈ ಪ್ರಸಂಗದಲ್ಲಿ ತಮ್ಮ ಜೀವವನ್ನು ಕೊಟ್ಟಾದರೂ ನೃಪಕುಮಾರರನ್ನು ಬದುಕಿಸದೆ ಬಿಡರು !

( ಅಂತಸ್ತಿನ ಮೇಲಿನ ಕೋಣೆಯು ಕಿಡಿಕೆಯು ಭರದಿಂದ ತೆರೆಯಲ್ಪಡುವದು. ಧನ್ವಂತರಿಯು ಕಾಣಿಸಿಕೊಳ್ಳುವನು ).

**ಧನ್ವಂತರಿ:**—ಸ್ವಾಮಿಭಕ್ತನಾದ ಸೇವಕನೆ, ನಾನು ಕರ್ತವ್ಯವನ್ನು ಉಪೇಕ್ಷಿಸುವವನಲ್ಲ ! ಮರಣಕ್ಕೆ ಹೆದರುವವನಲ್ಲ ! ಇದೊ ರಾಜಪುತ್ರರ ಪುನರ್ಜೀವನಕ್ಕಾಗಿ ಹೊರಟೆನು ! ( ಅದೃಶ್ಯನಾಗುವನು. ಧನೇಶ್ವರ ಮನೇಶ್ವರರೂ ಧಾವಿಸಿ ಹೋಗುವರು ).

**ನೀಲ:**—ಇದೇನು ಸ್ವಪ್ನಸೃಷ್ಟಿಯೋ ? ನಿಜವಾಗಿ ನಡೆದ ಸಂಗತಿಯೋ ? ( ಕ್ಷಣಕಾಲ ಗೇನಿಸಿ ) ನಾನು ನೋಡಿದ್ದುದು ಕನಸಲ್ಲ–ನಿಜವಾಗಿ ವರ್ತಿಸಿದ ಸಂಗತಿ ! ಮಹಾತ್ಮರಾದ ಗುರುಗಳು ತಮ್ಮ ಪ್ರಾಣವನ್ನು ತುಚ್ಛೀಕರಿಸಿ ಅರಸುಮಕ್ಕಳ ಪ್ರಾಣರಕ್ಷಣೆಗೆ ಧಾವಿಸಿದ್ದಾರೆ !

( ಚಾಂದ ಸವದಾಗರನು ಬರುವನು ).

**ಚಾಂದ:**—ಗುರುಮಹಾರಾಜರೆಲ್ಲಿ ?

**ನೀಲ:**—ಮಹಾಪ್ರಭುಗಳೆ, ತಾವು ಇಲ್ಲಿಗೆ ಯಾವಾಗ್ಗೆ ಬಂದಿರಿ ?

**ಚಾಂದ:**—ಇದೇನು, ನೀನು ಈ ಸಮಯದಲ್ಲಿ ಇಲ್ಲಿರುವೆ ?

**ನೀಲ:**—( ಹಣೆ ಹಣೆ ಗಟ್ಟಿಸಿಕೊಳ್ಳುತ್ತ ಅಳುವಸ್ವರದಿಂದ ) ಮಹಾಪ್ರಭುಗಳೆ, ಸರ್ವನಾಶವಾಗಿಹೊಗಿದೆ !

**ಚಾಂದ:**—ಆದದ್ದಾದರೂ ಏನು ? ಬೇಗಹೇಳು !

**ನೀಲ:**—ರಾಜಪುತ್ರರೆಲ್ಲರು ಸರ್ಪದುಂಶನದಿಂದ ಏಕಕಾಲಕ್ಕೆ ಮೃತಪಟ್ಟಿದ್ದಾರೆ ?

**ಚಾಂದ:**—ಇದರಲ್ಲಿ ಸರ್ವನಾಶವೇನು ? ಧನ್ವಂತರಿ ಗುರುಗಳೆಲ್ಲಿದ್ದಾರೆ ? ಅವರಿಗೆ ಸುದ್ದಿಯನ್ನು ತಿಳುಹಿದರೆ, ರಾಜಪುತ್ರರು ಮತ್ತೆ ಬದುಕಿಕೊಳ್ಳುವಂತೆ ಮಾಡುವರು.

**ನೀಲ:**—ಮಹಾರಾಜ್ಞಿಯವರೂ ನಾನೂ ರಾಜಪುತ್ರರ ದೇಹಗಳನ್ನು ಹೊತ್ತುಕೊಂಡು ಇಲ್ಲಿಗೆ ಬಂದಿದ್ದೇವೆ. ಆದರೆ !

**ಚಾಂದ:**—ಮತ್ತೇನಾಯಿತು ?

**ನೀಲ:**—ಇಂದು ಶನಿವಾರ. ಅಮಾವಾಸ್ಯೆ. ಆಶ್ಲೇಷಾ ನಕ್ಷತ್ರವಿದೆ. ಇದು ಗುರುಗಳಿಗೆ ವಿಷವೇಳೆಯಂತೆ. ಆದರೂ ಗುರುಗಳು ತಮ್ಮ ಮರಣವನ್ನು ತ್ರಣ ದಂತೆ ಭಾವಿಸಿ, ಮಂತ್ರಪೂತವಾದ ಕೋಣೆಯನ್ನು ಬಿಟ್ಟು ಹೊರಬಿದ್ದು ರಾಜ ಪುತ್ರರ ಪುನರ್ಜೀವನಕ್ಕೆ ಪ್ರಯತ್ನಿಸುತ್ತಿದ್ದಾರೆ !

**ಚಾಂದ:**—( ಉನ್ಮತ್ತನಂತಾಗಿ ) ಈಗ ಗುರುಗಳೆಲ್ಲಿ ? ಕೂಡಲೆ ಅವ ರನ್ನು ಆ ಮಂತ್ರಪೂತಕೋಣೆಗೆ ಕರೆದೊಯ್ಯು ! ಆ ಕೋಣೆಯಲ್ಲಿ ಅರವನ್ನು ಭದ್ರವಾಗಿ ಇರಿಸು! ರಾಜಪುತ್ರರು ಸತ್ತರೆ ಸಾಯಲಿ ! ಅವರ ಪ್ರಾಣಗಳಿಗಿಂತಲೂ ಗುರುಗಳ ಜೀವವು ಹೆಚ್ಚಿನದು ! ನಾನು ಮನಸೆಯೊಡನೆ ವಿರೋಧಿಸಿ ಜಯಶೀಲ ನಾಗಬೇಕಾದರೆ, ಗುರುಗಳ ಸಹಾಯವು ಅತ್ಯವಶ್ಯವಾದ್ದು. ನಾವೆಲ್ಲರೂ ಏನಾ ದರೂ ಮಾಡಿ ಗುರುಗಳ ಪ್ರಾಣರಕ್ಷಣೆಯಾಗುವಂತೆ ಯತ್ನಿಸಲೇ ಬೇಕು !

( ಧನ್ವಂತರಿಯು ಶಿಷ್ಯಸಮವೇತನಾಗಿ ಪ್ರವೇಶಿಸುವನು ).

**ಧನ್ವಂತರಿ:**— ರಾಜನೆ, ನೀನು ಹತ್ತಿರಿರುವಾಗ ಈ ಧನ್ವಂತರಿಯ ಪ್ರಾಣ ವನ್ನು ತಕ್ಕೊಳ್ಳುವವನಾವನು ? ಇನ್ನು ನಾನು ನಿರ್ಭಯನಾದೆನು !

**ಚಾಂದ:**— ಗುರುವರ್ಯರೆ, ಮಾತಾಡುತ್ತ ನಿಂತು ಸಮಯವನ್ನು ಕಳೆಯಬೇಡಿರಿ ! ಬೇಗನೆ ಹೋಗಿರಿ ! ಆ ಮಂತ್ರಪೂತ ಕೋಣೆಯನ್ನು ಪ್ರವೇಶಿ ಸಿರಿ. ಭದ್ರವಾಗಿದ್ದು ಆತ್ಮರಕ್ಷಣೆಮಾಡಿಕೊಳ್ಳಿರಿ !

**ಧನ್ವಂತರಿ:**— ರಾಜನೆ, ನಿನಗೆ ಆತ್ಮಶಕ್ತಿಯ ವಿಸ್ಮೃತಿಯುಂಟಾದಂತೆ ತೋರುತ್ತಿದ ! ( ಶಿಷ್ಯರ ಕಡೆಗೆ ನೋಡಿ ) ಇಂದು ನನಗೆ ಸಮಾಧಾನವಿಲ್ಲ ದಾಗಿದೆ. ದೇಹವು ಅವಸನ್ನವಾಗಿದೆ. ಏಕೆ ಹೀಗಾಗಿರಬಹುದು ? ( ಕುಳ್ಳಿರು ವನು. ಶಿಷ್ಯರು ಗಾಳಿಯನ್ನು ಬೀಸಹತ್ತುವರು. )

**ನೀಲ:**— ರಾಜಪುತ್ರರು ಪುನರ್ಜೀವನವನ್ನು ಪಡೆದರೆ ? ಮಹಾರಾಣಿಯು ವರೆಲ್ಲಿ ? ರಾಜಪುತ್ರರು ಎಲ್ಲಿದ್ದಾರೆ ?

( ರಾಣಿಯೂ ರಾಜಪುತ್ರರೂ ಬಂದು ರಾಜನಿಗೆ ನಮಸ್ಕರಿಸುವರು).

**ಚಾಂದ**:— ಪ್ರಿಯ ಪುತ್ರರೆ, ಇಂದಿನ ನಿಮ್ಮ ಪುನರ್ಜನ್ಮಕ್ಕೆ ಈ ಧನ್ವಂತರಿ ಗುರುಗಳು ಕಾರಣೀಭೂತರು. ಇವರಿಗೆ ನಮಸ್ಕರಿಸಿರಿ. ಹಾಗು ಅದೃಶ್ಯನಾಗಿದ್ದು ಸದಾ ನಿಮ್ಮ ಮೇಲೆ ಶುಭದೃಷ್ಟಿಯನ್ನಿರಿಸಿರುವ ಆ ಸದಾಶಿವನನ್ನು ಅಭಿವಂದಿಸಿರಿ. (ರಾಜಪುತ್ರರು ನಮಸ್ಕರಿಸುವರು. ) ನೀವು ಈಗ ಅನುಭವಿಸಿದ್ದ ಕ್ಷಣಿಕ ದುರ್ಮರಣಕ್ಕೆ ಆ ಕುರುಡಮನಸೆಯೆ ಕಾರಣೀಭೂತಳಾಗಿದ್ದಾಳೆ ! ಯಾವ ಮನುಷ್ಯನೂ ಅವಳ ಪೂಜೆಮಾಡದಂತೆ ಯತ್ನಿಸಿ, ನಾನು ಅವಳ ಗರ್ವಭಂಗ ಮಾಡದಿರೆನು ! ಆಗಲಿ, ಇನ್ನು ನೀವು ನಿಮ್ಮ ಹಡೆದವಳೊಡನೆ ಹೊರಟು ಅರಮನೆಗೆ ಹೋಗಿರಿ. ( ಹೋಗುವರು. )

**ಧನ್ವಂತರಿ**:— ಗಂಟಲು ಒಣಗಿದೆ ! ನಾಲಿಗೆಯು ಸೆಳೆಯುತ್ತಿದೆ ! ಭಯಂಕರ ನೀರಡಿಕೆಯಾಗಿದೆ !

(ಧನೇಶ್ವರನು ನೀರಿನ ಪಾತ್ರೆಯನ್ನು ತಂದು, ಅದರಲ್ಲಿ ಕೆನೆಮೊಸರ ಬೆರಿಸಬೇಕೆಂದು ಗೌಳಗಿತ್ತಿಯು ಕೊಟ್ಟು ಹೋಗಿದ್ದ ಮಡಿಕೆಯ ಮುಚ್ಚಳವನ್ನು ತೆರೆದನು. ಕೂಡಲೆ ಅದರೊಳಗಿಂದ ಹಾವು ಹೊರಬಿದ್ದು ಧನ್ವಂತರಿಗೆ ದಂಶನ ಮಾಡಿ ಪಲಾಯನ ಮಾಡಿತು. )

**ಧನ-ಮನರು**:— (ಒಮ್ಮೆಲೆ) ಹಾವು ! ಹಾವು ! ಮೊಸರ ಮಡಿಕೆಯಲ್ಲಿ ಹಾವು !

**ಧನ್ವಂತರಿ**:— ನನ್ನನ್ನು ಕಚ್ಚಿ ಮಾಯವಾಗಿ ಹೋಗಿಬಿಟ್ಟಿತು !

**ಚಾಂದ**:— (ಗಾಬರಿಯಾಗಿ ಧನ್ವಂತರಿಯ ಸನಿಯಕ್ಕೆ ಬಂದು) ಕಚ್ಚಿತೆ?

**ಧನ್ವಂತರಿ**:— ಮೂರ್ಖ ನಿಯತಿಯೆ, ನಿನ್ನ ಈ ಅಂಧಪ್ರಯತ್ನವು ವ್ಯರ್ಥವಾದ್ದು! ಚಾಂದ ಸವದಾಗರನು ಮಹಾಜ್ಞಾನದೊಡನೆ ಬಳಿಯಲ್ಲಿರುವಾಗ ನಿನ್ನ ಕಾರ್ಯವು ಹೇಗೆ ಸಫಲವಾದೀತು ?

**ಚಾಂದ**:— (ಹಣೆ ಗಟ್ಟಿಸಿಕೊಂಡು) ವಿಧಾತನ ವಿಧಾನವು ಅನುಲ್ಲಂಘನೀಯವು !

**ಧನ್ವಂತರಿ**:— ರಾಜನೆ, ಹೀಗೆ ಹುಚ್ಚನಂತಾಚರಿಸುತ್ತಿರುವುದೇಕೆ ? ಜಾಗ್ರತನಾಗು! ನನ್ನ ಮೈಯೆಲ್ಲವೂ ಉರಿಯಹತ್ತಿದೆ ! ನಿನ್ನ ಮಹಾಜ್ಞಾನವೆಲ್ಲಿ? ಅದನ್ನು ನನಗೆ ತಾಗಿಸು !

**ಚಾಂದ**:— ( ಉನ್ಮತ್ತನಂತಾಗಿ ಮೆಲ್ಲನೆ ) ಈಗ ನಾನೇನು ಮಾಡಲಿ ? ಓಡಿಹೋಗಲಿಯಾ ? ( ಕೊಂಚ ಮುಂದೆ ಹೋಗಿ ಮತ್ತೆ ಹಿಂದುರಿಗಿ ಬಂದು ) ಗುರುಮಹಾರಾಜರೆ, ಮಹಾಜ್ಞಾನವೆ ? ಅದೆಲ್ಲಿದೆ ?

**ಧನ್ವಂತರಿ**:— ನಿನ್ನ ಮುಕುಟದಲ್ಲಿದೆ ...

**ಚಾಂದ**:— ಇದು ನನ್ನ ಮುಕುಟ ! ( ಕೈಯಲ್ಲಿ ತಕ್ಕೊಂಡು ಅದರ ಭಾಗಗಳನ್ನು ಬೇರೆ ಬೇರೆ ಮಾಡಿ ಒಗೆಯುತ್ತ ) ಗುರುವರ್ಯರೆ, ನನ್ನ ಮುಕುಟ ವನ್ನು ನೋಡಿದಿರಾ ? ಮಹಾಜ್ಞಾನವಿಲ್ಲವೆ ಇಲ್ಲ! ( ಮುಕುಟದ ಉಳಿದ ಭಾಗ ವನ್ನು ಧನ್ವಂತರಿಯ ಮುಂದೆ ಬಿಸಾಟಿದನು ).

**ಧನ್ವಂತರಿ**:— (ಚಕಿತನಾಗಿ ಜೋಲಿ ಹೊಡೆಯುತ್ತ ಚಾಂದ ಸವದಾ ಗರನನ್ನು ಹಿಡಿದುಕೊಂಡು ನಿಲ್ಲುವನು) ಬ್ರಹ್ಮಶಾಪವು ನಿಜವಾದಂತಾಯಿತು ! ದಿನದ ಬೆಳಕು ನನ್ನ ಕಣ್ಣಿಗೆ ಸಹನವಾಗದಿದೆ ! ಇನ್ನು ನನ್ನನ್ನು ಒಳಗೆ ಹೊತ್ತು ಕೊಂಡು ಹೋಗಿರಿ! (ಚಾಂದನ ಸಂಗಡ ಒಳಮನೆಯ ಕಡೆಗೆ ಕೊಂಚ ನಡೆದು ಹೋಗಿ ಮತ್ತೆ ತಿರುಗಿ ನಿಂತು ) ನಾನು ಹೀಗೆ ಸಹಜವಾಗಿ ಸಾಯಲಾರೆನು. ಏನಾದರೂ ಉಪಾಯ ಮಾಡಲೇಬೇಕು. ( ಕ್ಷಣಕಾಲಗೇನಿಸಿ ಶಿಷ್ಯರನ್ನು ಕರೆದು) ಉದ್ಯಾನದಲ್ಲಿ ವಶಿಲ್ಯಕರಣಿಯ ಬೀಜವನ್ನು ಬಿತ್ತಿದ್ದೆನು. ಹೋಗಿ ಶೋಧಮಾಡಿರಿ. ಗಿಡಗಳಿದ್ದರೆ, ಮಂತ್ರದಿಂದ ಶುದ್ಧಮಾಡಿ ತನ್ನಿರಿ. ಗಿಡವಿದ್ದರೆ– ಅದನ್ನು ನೀವು ತಂದುಕೊಟ್ಟರೆ– ನಾನು ಬದುಕುವೆನು ! ಬೇಗನೆ ಹೋಗಿ ಬನ್ನಿರಿ. ( ಶಿಷ್ಯರು ಹೋಗುವರು ) ರಾಜನೆ, ಇನ್ನು ನನ್ನನ್ನು ಕರೆದುಕೊಂಡು ಒಳಗೆ ನಡೆ.

( ಚಾಂದನು ಧನ್ವಂತರಿಯನ್ನು ಕೈಹಿಡಿದು ಸಾಗಿಸಿಕೊಂಡು ಹೋಗುವನು).

(ಉಪವನದಲ್ಲಿ ಧನೇಶ್ವರ–ಮನೇಶ್ವರರು ವಶಲ್ಯಕರಣಿಯ ಗಿಡವನ್ನು ಕಿತ್ತುವದರಲ್ಲಿರುವರು. ಗೌಳಿಗಿತ್ತಿಯ ವೇಷದಲ್ಲಿದ್ದ ಮನಸಾದೇವಿಯು ಮತ್ತೆ ಮೈದೋರುವಳು ).

**ಮನಸಾ**:— ಅಣ್ಣಗಳಿರಾ, ಏನು ಮಾಡುತ್ತಿರುವಿರಿ ?

**ಧನ**:— ನೀನು ಯಾವ ಧೈರ್ಯದಿಂದ ಮತ್ತೆ ನಮ್ಮ ಕಣ್ಣಿಗೆ ಬಿದ್ದಿರುವೆ?

**ಮನ**:— ನಡೆದಿದ್ದ ಅನರ್ಥದ ತರುವಾಯದಲ್ಲಿ ಮತ್ತೆ ನೀನು ನಮ್ಮ ಹತ್ತರ ಬಂದೀಯೆಂದು ನಾನು ಆಶಿಸಿರಲಿಲ್ಲ !

**ಮನಸಾ:**— ನಿಮ್ಮ ಮಾತಿನ ಹೊಲಬು ನನಗೆ ಹೊಳೆಯದಾಗಿದೆ! ಆದದ್ದಾದರೂ ಏನು? ನನಗೆ ಚನ್ನಾಗಿ ತಿಳಿಯುವಂತೆ ಸ್ಪಷ್ಟವಾಗಿ ಮಾತಾಡಿರಿ!

**ಧನ:**— ಆಗುವದೇನು ? ಸರ್ವನಾಶವಾಗಿ ಹೋಗಿದೆ!

**ಮನ:**— ನಿನ್ನ ಮೊಸರ ಮಡಿಕೆಯಿಂದ ಹಾವು ಹೊರಬಿದ್ದು ಗುರುಗಳನ್ನು ಕಚ್ಚಿಬಿಟ್ಟಿತು! ಅವರು ಓಷ್ಮಗತ ಪ್ರಾಣರಾಗಿ ಬಿದ್ದಿದ್ದಾರೆ! ಹೊಯ್ಮಾಲೆಯೆ, ಮೊಸರ ಗಡಿಗೆಯಲ್ಲಿ ಹಾವನ್ನು ಹಿಡಿದಿರಿಸಿ ತಂದುಕೊಡಬೇಕೆ?

**ಮನಸಾ:**— (ಅಳುವ ಸ್ವರದಿಂದ) ಅಣ್ಣಗಳಿರಾ, ನಾನು ಯಾವ ಪಾಪವನ್ನೂ ಅರಿಯದವಳು! ನೀವು ನಿರರ್ಥಕವಾಗಿ ನನಗೆ ದೋಷಕೊಡುತ್ತಿರುವಿರಿ! ನಿಮ್ಮ ಗುರುಗಳು ನನ್ನ ಗುರುಗಳೂ ಅಹುದು! ಗುರುಗಳು ಸಾಯಬೇಕೆಂದು ಕೋಮಲ ಪ್ರಕೃತಿಯ ನಾನು ಎಂದಾದರೂ ಆಶಿಸುವ ಸಂಭವವುಂಟೇ? ಗುರುಗಳು ಕೆನೆಮೊಸರ ತಿನ್ನಲಿ ಎಂದು ನಾನು ಭಕ್ತಿಯನ್ನು ತೋರಿಸಹೋದೆನು! ಪರಿಣಾಮವು ತೀರ ವಿಪರೀತವಾಯಿತು! ಅಯ್ಯೋ, ಗುರುಗಳೆ, 'ನಾನು ಮಹಾ ಪಾಪಿಷ್ಠಳು! ನಿಮ್ಮ ಮರಣಕ್ಕೆ ನಾನು ಅಪರೋಕ್ಷ ರೀತಿಯಿಂದಾದರೂ ಕಾರಣಳಾದೆನಲ್ಲವೆ? (ದೊಡ್ಡದನಿಯಿಂದ ಅಳಹತ್ತುವಳು. ಎದೆ ಎದೆ ಬಡೆಕೊಳ್ಳುವಳು).

**ಧನ:**— ಈಗ ನೀನು ರಂಬಾಟವೆಬ್ಬಿಸಬೇಡ. ಸುಮ್ಮನಿರು.

**ಮನ:**— ಮೊಸರ ಮಡಿಕೆಯಲ್ಲಿ ಹಾವು ಎಲ್ಲಿಂದ ಬರಬೇಕು ? ನೀನು ಬುದ್ಧಿಪೂರ್ವಕವಾಗಿಯೆ ಹಾವನ್ನು ದಧಿ–ಪಾತ್ರದಲ್ಲಿ ಅಡಗಿಸಿರಬೇಕು!

**ಮನಸಾ:**— ಅಣ್ಣಗಳಿರಾ, ನಿಮಗೆ ನನ್ನಲ್ಲಿ ನಂಬುಗೆಯುಂಟಾಗಲೊಲ್ಲದೆ? ಯಾವ ದಿವ್ಯವನ್ನು ಮಾಡಿತೋರಿದರೆ, ನಿಮಗೆ ವಿಶ್ವಾಸವುಂಟಾಗುವದೆಂಬದನ್ನು ಹೇಳಿರಿ! ನಾನು ಆ ದಿವ್ಯವನ್ನಾಚರಿಸಲಿಕ್ಕೆ ಸಿದ್ಧಳಿದ್ದೇನೆ! ನಿಮ್ಮ ಕೊರಳಾಣೆಯಾಗಿಯೂ ನಾನು ನಿಷ್ಪಾಪಳು! ಆ ಹಾವು ಅಂಥಿಂಥದಲ್ಲ! ಎಮ್ಮೆಯ ಮೊಲೆಗಳನ್ನು ಹೀರಿ ಗಟಗಟನೆ ಹಾಲು ಕುಡಿಯುವ, ಮನುಷ್ಯರನ್ನು ಸುತ್ತು ಬಿಗಿದು ಮೊಲೆಗಳನ್ನು ಬರಿದುಮಾಡುವ ಆ ಹಾವು ಸಾಮಾನ್ಯವಾದದ್ದೇ? ಇಂತಹ ಹಾವು ನನಗೆ ಕಾಣದಂತೆ ಬಂದು ಮೊಸರಮಡಿಕೆಯಲ್ಲಿ ವಾಸ್ತವ್ಯವನ್ನು ಹೂಡಿದ್ದು ಅಸಂಭವನೀಯವೆ?

**ಧನ:**— ಈ ಸುಂದರಿಯು ಬುದ್ಧಿಪೂರ್ವಕವಾಗಿ ಹಾವನ್ನು ಹೊತ್ತು ತಂದಿರುವದು ಅಸಂಭವನೀಯವೆ ಸರಿ!

**ಮನ:**— ನನಗೂ ಹೀಗೆಯೆ ಅನಿಸುತ್ತಿದೆ! ಆದರೆ ಅಣ್ಣಾ, ಹೆಂಗಸರ ನೆಲೆಯು ಯಾರಿಗೂ ತಿಳಿಯದೆಂದು ಬುದ್ಧಿವಂತರು ಹೇಳುತ್ತಿರುವುದನ್ನು ನೀನು ಕೇಳಿಲ್ಲವೆ? ಮಾಟಗಾರತಿಯಾಗಿದ್ದ ಇವಳು ಗುರುಗಳ ಹತ್ಯೆಗಾಗಿ ಈ ಕೃತಿಯನ್ನೇಕೆ ಮಾಡಿರಬಾರದು?

**ಮನಸಾ:**— ಒಳಿತೆನ್ನಿರಿ! ಗುರುಗಳು ತಮ್ಮ ಮಂತ್ರ-ತಂತ್ರಗಳ ಶಕ್ತಿಯಿಂದ ನಾಗರಿಕರೆಲ್ಲರಿಗೆ ಹಿತಮಾಡಿದವರು. ನಾನೂ ಅವರಿಂದ ಉಪಕೃತಳು. ಹಾಗು ಮತ್ತೊಂದು ದೊಡ್ಡ ಉಪಕಾರವನ್ನು ಮಾಡಿಸಿಕೊಳ್ಳಲಿಕ್ಕೆ ಗುರುಗಳನ್ನು ಹುಡುಕಿಕೊಂಡು ಬಂದವಳು. ಇಂತಹ ನಾನು ಗುರುಗಳ ಮರಣಕ್ಕೆ ಹಾವು ಹೊತ್ತು ತಂದಿದ್ದೇನಾದೀತೆ? ನೀವೇನು ದಡ್ಡರಲ್ಲ! ವಿಚಾರಿಸಿ ನೋಡಿ ಬಳಿಕ ನನ್ನಮೇಲೆ ಶಬ್ದ ಹೊರಿಸಿರಿ! ನಿಷ್ಕಾರಣ ಮಾತಾಡಿ ನನ್ನ ಕೋಮಲಮನಸ್ಸಿಗೆ ವ್ಯಥೆಯನ್ನುಂಟುಮಾಡಬೇಡಿರಿ! ಗುರುಗಳ ಮರಣದ ಆಶಂಕೆಯಿಂದ ಶೋಕಾಕುಲಳಾಗಿದ್ದ ನನಗೆ ಅವಿವೇಚನೆಯ ಕಟುಮಾತಾಡಿ ಬರೆಗೊಡಬಯಿಸಬೇಡಿರಿ! ಆ ಹಾಳು ಹಾವು ಎಲ್ಲಿಯದೊ ಏನೊ! ನನ್ನ ಸುತ್ತ ಕೈತೊಳೆದುಕೊಂಡು ಬೆನ್ನ ಹತ್ತಿರುವಂತೆ ಕಾಣುತ್ತಿದೆ! ಅದು ಹಾಳಾಗಿ ಹೋಗಲಿ! ಮುಂದೆ ಹೆಜ್ಜೆಯಿಕ್ಕಲಾರದೆ ಸತ್ತುಹೋಗಲಿ! ( ಚಟುಕೆಯನ್ನು ಮುರಿಯುವಳು ).

**ಧನ:**— ಏನೆ ಇರಲಿ, ಈ ಸಮಯದಲ್ಲಿ ನಾವು ನಿಶ್ಚಿಂತರಾಗಿ ಹರಟೆ ಹೊಡೆಯುವಂತಿಲ್ಲ. ಈಗ ನೀನು ಹೋಗಿಬಿಡು.

**ಮನ:**—ಇವಳು ಇಲ್ಲಿ ನಿಲ್ಲುವದರಿಂದ ನಮಗಾಗುವದೇನು? ನಾನಂತೂ ಇವಳೊಡನೆ ಮಾತಾಡುತ್ತ ನನ್ನ ಕೆಲಸವನ್ನು ಭರದಿಂದ ಸಾಗಿಸಿದ್ದೇನೆ.

**ಮನಸ:**— ಅಣ್ಣಗಳಿರಾ, ಮನೆಗೆ ಹೊರಡಲಿಕ್ಕೆ ಕಾಲೇ ಏಳದಾಗಿದೆ. ಗುರುಗಳ ಅವಸ್ಥೆ ಏನಾಗುವದೋ ಎಂದು ಮನಸ್ಸಿನಲ್ಲಿ ವ್ಯಾಕುಲಗೊಂಡಿದ್ದೇನೆ.

**ಧನ:**— ಕೋಮಲ ಪ್ರಕೃತಿಯ ಅಬಲೆಯು ನೀನು. ಗುರುಗಳಿಗೊದಗಿದ್ದ ಈ ಸಂಕಟದಿಂದ ವ್ಯಥೆಗೊಳ್ಳುವದು ಸಹಜವಾಗಿದೆ.

**ಮನ:—** ಮೇಲಾಗಿ ಗುರುಗಳ ಈ ವಿಪತ್ತಿಗೆ ಅಪ್ರತ್ಯಕ್ಷರೀತಿಯಿಂದ ನೀನು ಕಾರಣಳಾಗಿರುವದರಿಂದ ಹೆಚ್ಚಾಗಿ ಹಳಹಳಿಸಲಿಕ್ಕೆ ಅನುವಾಗಿದೆ.

**ಮನಸ:—** ಈ ವಿಷವೇಳೆಯಲ್ಲಿ ಗುರುಗಳಿಗೆ ಹಾವು ಕಚ್ಚಿದ್ದು ಬಹು ಅಸಮಾಧಾನದ ಸಂಗತಿಯು. ಗುರುಗಳು ಈ ವಿಪತ್ತಿನಿಂದ ಪಾರಾದಾರೆ! ನೀವು ಈಗ ಏನು ಮಾಡಬೇಕಾಗಿದೆ?

**ಧನ:—** ಈ ವಿಷಮ ವೇಳೆಯಲ್ಲಿ ಗುರುಗಳ ಮಂತ್ರ-ತಂತ್ರಗಳ ಸಾಮರ್ಥ್ಯವು ನಡೆಯುವಂತಿಲ್ಲ. ಕಾರಣ ನಾವು ಈಗ ಗುರುಗಳ ಹೇಳಿಕೆಯಪ್ರಕಾರ ಈ ವಶಿಲ್ಯಕರಣಿಯ ಗಿಡವನ್ನು ಕಿತ್ತಿಕೊಂಡು ಹೋಗಬೇಕಾಗಿದೆ. ಇದರ ಬೇರಿನಿಂದ ಗುರುಗಳ ವಿಷಪರಿಹಾರವಾಗಬೇಕಾಗಿದೆ.

**ಮನ:—** ಅಂತೆಯೆ ನಾವು ಈ ಕಂಟಿಯನ್ನು ಕಿತ್ತುವದರಲ್ಲಿದ್ದೇವೆ.

**ಮನಸ:—** ಗುರುಗಳಿ ಹೀಗೆ ಹೇಳಿದರೆ? ಆಶ್ಚರ್ಯವೆ ಸರಿ!

**ಧನ-ಮನರು:—** (ಒಮ್ಮೆಲೆ) ಅದೇಕೆ?

**ಮನಸ:—** ಸರ್ಪದಂಶನದಿಂದ ಗುರುಗಳು ಎಚ್ಚರದಪ್ಪಿರಲಿಕ್ಕೆ ಬೇಕು. ಇಲ್ಲವಾದರೆ, ಈ ಕಂಟಿಯನ್ನು ಕಿತ್ತುವ ನಿರರ್ಥಕ ಶ್ರಮವನ್ನು ನಿಮಗೆ ಆಗಗೊಡುತ್ತಿದ್ದಿಲ್ಲ! ಯಾಕಂದರೆ, ಈ ಕಂಟಿಯ ಬೇರು ಸರ್ಪದಂಶನಕ್ಕೆ ಉಪಯುಕ್ತವಾದ್ದಲ್ಲ—ಎಲೆಗಳು ಮಾತ್ರ ಉಪಯೋಗಕ್ಕೆ ಬೀಳತಕ್ಕವುಗಳು. (ಧನಮನರು ಒಬ್ಬನ ಮೋರೆಯನ್ನೊಬ್ಬನು ನೋಡಹತ್ತುವರು). ನನಗೆ ನೀವು ಮೊದಲೇ ಹೇಳಿದ್ದರೆ ನಾನು ನಿಮ್ಮ ಶ್ರಮವನ್ನು ಉಳಿಸುತ್ತಿದ್ದೆನು. ನೀವು ಏತಕ್ಕಾಗಿ ಈ ಕಂಟಿಯನ್ನು ಕಿತ್ತುವಿರೆಂಬುದು ನನಗೆ ಮೊದಲು ಗೊತ್ತಿರಲಿಲ್ಲ.

**ಧನ:—** ಗುರುಗಳು ಈ ಕಂಟಿಯನ್ನು ಕಿತ್ತಿತರಲಿಕ್ಕೆ ಹೇಳಿದ್ದಾರೆ. ನಾವು ಅವರ ಅಪ್ಪಣೆಯನ್ನು ಅಕ್ಷರಶಃ ಪಾಲಿಸಲಿಕ್ಕೆ ಬೇಕು.

**ಮನ:—** ಕಂಟಿಯನ್ನು ಕಿತ್ತಿಕೊಂಡು ಹೋದರೆ, ಅದರಲ್ಲಿ ಎಲೆಗಳು ಇದ್ದೆ ಇರುವವು. ಗುರುಗಳು ತಮಗೆ ಬೇಕಾದುದನ್ನು ವ್ಯವಹರಿಸಿಕೊಳ್ಳಲಿ.

**ಮನಸಾ:—** ಬುದ್ಧಿವಂತರೆ, ಈ ಕಂಟಿಯನ್ನು ಕಿತ್ತಲಿಕ್ಕೆ ಬಹಳವೇಳೆ ಬೇಕಾಗುವದು. ಗುರುಗಳನ್ನು ಕಚ್ಚಲಿಕ್ಕೆ ಧೈರ್ಯಗೊಂಡ ಆ ಹಾವಿನ ವಿಷವು

ಬಹು ಪರಿಣಾಮಕಾರಕವಿರಲಿಕ್ಕೆ ಬೇಕು. ಅಂತೆಯೆ ಗುರುಗಳು ಸರ್ಪದಂಶನದ ತರುವಾಯದಲ್ಲಿ ಅಲ್ಪಾವಧಿಯಲ್ಲಿ ಎಚ್ಚರದಪ್ಪಿದ್ದಾರೆ. ಈ ಅಧಿಯಲ್ಲಿ ಅವರ ಅವಸ್ಥೆ ಏನಾಗಿದೆಯೊ ಏನೊ! ನಾನು ಆಗಳೆ ಇತ್ತಕಡೆಗೆ ಬರುತ್ತಿರುವಾಗ್ಗೆ ಗುರುಗೃಹದಲ್ಲಿ ರೋದನದ ಗಲಾಟೆ ನಡೆದಿತ್ತು! ನೀವು ತೊಪ್ಪಲ ತಕ್ಕೊಂಡು ಬೇಗ ಹೊರಡಿರಿ. ನಾನು ಉತ್ಕಂಠಿತಳಾಗಿ ಇಲ್ಲಿಯೆ ಕುಳಿತಿರುವೆನು. ಗುರುಗಳು ಸುಖರೂಪರಾಗಿದ್ದ ಸಂಗತಿಯನ್ನು ಕೇಳಿದ ಹೊರತು ನಾನು ಮನೆಗೆ ಹೋಗದವಳಾಗಿದ್ದೇನೆ. (ಧನ–ಮನರು ತೊಪ್ಪಲವನ್ನು ತಕ್ಕೊಂಡು ಗಾಬರಿಯಾಗಿ ಓಡಿಹೋಗುತ್ತಾರೆ. ಮನಸಾದೇವಿಯು ವಶಿಲ್ಯಕರಣಿಯ ಕಂಟಿಯನ್ನು ಕಿತ್ತಿಕೊಂಡು, ಆ ಸ್ಥಳದಲ್ಲಿ ನೀರು ನಿಂತಿರುವಂತೆಮಾಡಿ ಅದೃಶ್ಯಳಾಗಿ ಹೋಗುತ್ತಾಳೆ. ಬಳಿಕ ಚಾಂದನು ಧನ್ವಂತರಿಯನ್ನು ಹಿಡಿದುಕೊಂಡು ಬರುವನು. ಸಂಗಡ ಧನ–ಮನರಿರುವರು).

**ಧನ:—** ಗೌಳಿಗಿತ್ತಿಯು ಹೋಗಿ ಬಿಟ್ಟಿದ್ದಾಳೆ!

**ಮನ:—** (ಕೊಂಚ ಮುಂದೆ ಹೋಗಿ ನೋಡಿ) ವಶಿಲ್ಯ ಕರಣಿಯ ಗಿಡವೂ ಇಲ್ಲ!

**ಚಾಂದ:—** ಅವಳು ನಮ್ಮ ಕಣ್ಣಿಗೆ ಕಾಣಿಸಳೆಂಬದನ್ನು ನಾನು ಮೊದಲೇ ಊಹಿಸಿದ್ದೆನು. ಅವಳು ನಿಜವಾಗಿಯೂ ಗೌಳಿಗಿತ್ತಿಯಲ್ಲ. ಮಾಟಗಾರತಿಯಾದ ಮನಸೆಯು ವೇಷಾಂತರಹೊಂದಿ ಬಂದು, ನನ್ನಂತೆಯೆ ನಿಮ್ಮನ್ನೂ ಮೋಸಗೊಳಿಸಿದ್ದಾಳೆ!

**ಧನ್ವಂತರಿ:—** ಹೀಗೆ ಸಹಜರೀತಿಯಿಂದ ಸಾಯುತಕ್ಕವನು ನಾನಲ್ಲ! ಬ್ರಹ್ಮಶಾಪವನ್ನು ನಿಷ್ಫಲಗೊಳಿಸುವೆನು! ಮನಸೆಯ ಕಪಟನಾಟಕವನ್ನು ನಿರರ್ಥಕವಾಗುವಂತೆ ಮಾಡುವೆನು. ಶಿಷ್ಯರೆ, ವಶಿಲ್ಯಕರಣಿಯ ಗಿಡವಿಲ್ಲದಿದ್ದರಿಲ್ಲ. ಆ ಗಿಡದ ಕೆಳಗಿನ ಮಣ್ಣನ್ನು ತಂದುಕೊಡರಿ. (ಧನ–ಮನರು ಮುಂದೆ ಹೋಗುವರು. ನೋಡುವರು. ವಶಿಲ್ಯ ಕರಣಿಯ ಗಿಡವಿದ್ದ ಸ್ಥಳದಲ್ಲಿ ನೀರು ನಿಂತಿರುವುದನ್ನು ಕಂಡು ಬಿಗಿಗ್ಯೆಯಿಂದ ತಿರುಗಿ ಬರುವರು.)

**ಧನ–ಮನರು:—** ಆ ಸ್ಥಳದಲ್ಲಿ ಮಣ್ಣಿಲ್ಲ. ಅಲ್ಲಿ ಒಂದು ಸಣ್ಣ ಕೆರೆಯಾಗಿದೆ.

**ಧನ್ವಂತರಿ:**— ನಾನು ಎಲ್ಲ ರೀತಿಗಳಿಂದಲೂ ನಿರುಪಾಯನಾದೆನು! ವಿಧಿಲಿಖಿತವನ್ನು ತಪ್ಪಿಸಿಕೊಳ್ಳಲಾರದಾದೆನು! ಆಗಲಿ, ಬ್ರಹ್ಮಸಂಕಲ್ಪವು ಅನ್ವರ್ಥವಾಗಲಿ! ರಾಜನೆ, ಇನ್ನು ನಾನು ಪರಲೋಕಕ್ಕೆ ತೆರಳುವೆನು. ಶಿಷ್ಯರೆ, ನನಗೆ ಕೊನೆಯ ಅಪ್ಪಣೆ ಕೊಡಿರಿ. ಶಿವ, ಶಿವ, ಶಿವ! (ಧನ--ಮನರು ಗುರುಗಳ ದೇಹವನ್ನು ಹೊತ್ತುಕೊಂಡು ಹೋಗುವರು. ಗಾಬರಿಗೊಂಡಿದ್ದ ನೀಲನು ರಭಸದಿಂದ ಪ್ರವೇಶಿಸುವನು).

**ನೀಲ:**— ಮಹಾಪ್ರಭುವೆ, ಸರ್ವನಾಶವಾಯಿತು! ಹಾವುಗಳು ಮತ್ತೆ ರಾಜಪುತ್ರರನ್ನು ಕಚ್ಚಿದವು!

**ಚಾಂದ:**—ಏನು. ಏನಾಯಿತು?

**ನೀಲ:**— ನಾವು ರಾಜಪುತ್ರರೊಡನೆ ಅರಮನೆಯನ್ನು ಪ್ರವೇಶಿಸುವದರಲ್ಲಿದ್ದೆವು. ಜಂತಿಯಿಂದ ಆರು ಹಾವುಗಳು ಒಮ್ಮೆಲೆ ಇಳಿದುಬಂದು ರಾಜಪುತ್ರರ ಕಪಾಳವನ್ನು ಕಚ್ಚಿದವು! (ಚಾಂದ ಸವದಾಗರನು ಹಣೆಹಣೆಬಡಕೊಂಡು ಕಾತರನಾಗಿ ಕುಳಿತು ಬಿಡುವನು). ಮಹಾಪ್ರಭುವೆ, ರಾಜಪುತ್ರರೆಲ್ಲರು ಹಾವಿನ ವಿಷದಿಂದ ಮಡಿದು ಹೋದರು. ದುರ್ದೈವಿಯಾದ ನಾನು ಅವರ ಪ್ರಾಣವನು ಉಳಿಸಿಕೊಳ್ಳಲಾರದವನಾಗಿ, ಮರಣವನ್ನು ಕಣ್ಣುಕಟ್ಟ ಕಂಡು ಸುದ್ದಿಯನ್ನು ತಿಳುಹಲಿಕ್ಕೆಂದು ಇಲ್ಲಿಗೆ ಬಂದಿರುವೆನು! ಮುಂದಿನ ಗತಿಯೇನು?

**ಚಾಂದ:**— ಗತಿ ಏನೂ ಇಲ್ಲ! ನಾವೆಲ್ಲರೂ ನಿರ್ಗತಿಕರು! ಮಹಾಜ್ಞಾನವಿತ್ತು—ಕೈಬಿಟ್ಟು ಹೋಯಿತು! ಧನ್ವಂತರಿ ಗುರುಗಳಿದ್ದರು—ತೊರೆದು ಹೋಗಿಬಿಟ್ಟರು! ಇನ್ನು ನಮಗೆ ಆಕಾಶದಲ್ಲಿ ಅದೃಶ್ಯರಾಗಿದ್ದ ಆ ಪಾರ್ವತೀ-ಪರಮೇಶ್ವರರೆ ಸಹಾಯಕರು!

**ನೀಲ:**— ರಾಜ್ಞಿಯವರ ಸ್ಥಿತಿಯು ತೀರ ವಿಷಾದಕರವಾಗಿದೆ! ನಾನವರ ಸ್ಥಿತಿಯನ್ನು ನೋಡಲಾರದವನಾಗಿರುವೆನು! ಅವರು ಹುಚ್ಚರಂತೆ ಆಚರಿಸಹತ್ತಿದ್ದಾರೆ! ಅವರು ಒಮ್ಮೊಮ್ಮೆ ರಾಜಪುತ್ರರ ಶವಗಳನ್ನು ಅಪ್ಪಿಕೊಳ್ಳುವರು! ಶವಗಳನ್ನೆತ್ತಿಕೊಂಡು ಮುದ್ದಿಸುವರು, ಮತ್ತೊಮ್ಮೆ ಮಕ್ಕಳ ಮರಣಕ್ಕಾಗಿ ಮನಸೆಯನ್ನು ಶಪಿಸುವರು! ಇನ್ನೊಮ್ಮೆ ಪುತ್ರರ ಪುನರ್ಜೀವನಕ್ಕಾಗಿ ಮನಸಾದೇವಿಯ ಹರಕೆಗಳನು, ಬೇಡಿಕೊಳುವರು!

**ಚಾಂದ:**— (ರಭಸದಿಂದೆದ್ದು) ಏನು, ರಾಜಪುತ್ರರ ಪುನರ್ಜೀವನಕ್ಕೋಸುಗ ಮನಸೆಯ ಪೂಜೆಮಾಡುವದೇ ? ಆಗದು ! ಸರ್ವಥಾ ಆಗದು ! ಇಂದಿನಿಂದ ನನ್ನ ರಾಜ್ಯದಲ್ಲಿ ಮನಸೆಯ ಪೂಜೆಯನ್ನು ಮಾಡಿದವನಷ್ಟೆ ಏಕೆ, ಮಾಡಬಯಿಸುವವನೂ ಕೂಡ ಮರಣದಂಡನೆಯನ್ನು ಹೊಂದುವನು ! ಈ ಮೇರಿಗೆ ನಗರದಲ್ಲಿ ಡಂಗುರ ಹೊಡಿಸಲಿಕ್ಕೆ ನಗರರಕ್ಷಕನಿಗೆ ತಿಳುಹು.

( ಚಾಂದ ಸವದಾಗರನ ಹೆಂಡತಿಯಾದ ಸನಕೆಯು ಉನ್ಮಾದಿನಿಯಂತೆ ಪ್ರವೇಶಿಸುವಳು ).

**ಸನಕೆ:**— ಬೇಡಿರಿ! ಹೀಗೆ ಅಪ್ಪಣೆ ಮಾಡಬೇಡಿರಿ ! ನಿಮಗೆ ನನ್ನಾಣೆಯಿದೆ! ನೀವು ನನಗಾಗಿ–ರಾಜಪುತ್ರರ ಪುನರ್ಜೀವನಕ್ಕಾಗಿ–ಈ ಅಪ್ಪಣೆಯನ್ನು ತಿರುಗಿ ತಕ್ಕೊಳ್ಳಿರಿ !

**ಚಾಂದ:**— ರಾಜ್ಞಿ, ಪುತ್ರರ ಪುನರ್ಜೀವನವು ನನಗೆ ಬೇಕಿಲ್ಲ ! ಮಕ್ಕಳೆಂಬಿವು ಮಾಯೆಯ ಒಡವೆಗಳು! ಇವುಗಳನ್ನು ಸದಾ ಅವಚಿಕೊಂಡಿರಬೇಕೆನ್ನುವವನು ಪ್ರಸಂಗವಿಶೇಷದಲ್ಲಿ ಮೋಹಾಂಧನಾಗಿ ಸತ್ವಭ್ರಷ್ಟನಾಗುವನು ! ಆದರೆ ಸತ್ವಭ್ರಷ್ಟನಾಗುವದು ನನಗೆ ಬೇಡ! ಕಾರಣ ಸತ್ವವನ್ನು ಕಳೆದುಕೊಂಡು ಮಕ್ಕಳನ್ನು ಬದುಕಿಸಿಕೊಳ್ಳುವುದಕ್ಕಿಂದ ಮಕ್ಕಳಿಗೆ ತಿಲಾಂಜಲಿಗೊಟ್ಟು ಸತ್ವರಕ್ಷಣೆ ಮಾಡಿಕೊಳ್ಳುವದು ಮೇಲಾದ್ದು ! ಮಕ್ಕಳ ಮರಣದಿಂದ ಇಂದು ನಾವು ಮಾಯೆಯ ಬಂಧನದಿಂದ ಮುಕ್ತರಾಗಿದ್ದೇವೆ. ಇದಕ್ಕಾಗಿ ನಾವು ಸಂತೋಷಿಸಬೇಕಲ್ಲದೆ, ಶೋಕಿಸಲಾಗದು ! ಎಲೆ ಕುರುಡ ಮನಸ್ಸೆ, ಇನ್ನು ನೀನು ನನ್ನನ್ನೇನು ಮಾಡುವೆ ? ಇನ್ನು ನನಗೆ ಏತರ ಹೆದರಿಕೆ ತೋರುವೆ ? ನಿನಗೆ ನನ್ನ ಪೂಜೆಯು ಬೇಕೆ ? ಪೂಜೆಯನ್ನೆಂದೂ ಕಾಣಲಾರೆಯಿಷ್ಟೇ ಅಲ್ಲ. ಯಥೇಚ್ಛವಾಗಿ ಒದಿಕೆಗಳ ಪ್ರಸಾದವನ್ನು ಪಡೆಯುವೆ! ಸಮುಗಾರ ದೇವರಿಗೆ ಮಚ್ಚೆಯ ಪೆಟ್ಟಲ್ಲದೆ ಬೇರೇನೂ ದೊರೆಯದು ! (ವಿಕಟಹಾಸ್ಯ ಮಾಡುವನು).

## ಮೂರನೆಯ ಪ್ರವೇಶ

( ಪ್ರಾಸಾದದೊಳಗಿನ ದೇವಮಂದಿರ. ಹರಪಾರ್ವತಿಯರ ಯುಗಲ ಮೂರ್ತಿಯ ಮುಂದೆ ಚಾಂದ ಸವದಾಗರನು ಈಶಸ್ತವನ ಮಾಡುತ್ತ ನಿಂತಿರುವನು ).

ನಮಸ್ತೇ ನಮಸ್ತೇ ವಿಭೋ ವಿಶ್ವಮೂರ್ತೇ
ನಮಸ್ತೇ ನಮಸ್ತೇ ಚಿದಾನಂದಮೂರ್ತೇ
ನಮಸ್ತೇ ನಮಸ್ತೇ ತಪೋಯೋಗಗಮ್ಯ
ನಮಸ್ತೇ ನಮಸ್ತೇ ಶ್ರುತಿಜ್ಞಾನಗಮ್ಯ
ಪ್ರಭೋ ಶೂಲಪಾಣೇ ವಿಭೋ ವಿಶ್ವನಾಥ
ಮಹಾದೇವ ಶಂಭೋ ಮಹೇಶತ್ರಿನೇತ್ರ
ಶಿವಾ ಕಾಂತ ಶಾಂತ ಸ್ಮರಾರೇ ಪುರಾರೇ
ತ್ವದನ್ಯೋ ವರೇಣ್ಯೋ ನ ಮಾನ್ಯೋ ನಗಣ್ಯಃ

(ಚಾಂದನು ಸಾಷ್ಟಾಂಗ ನಮಸ್ಕಾರಮಾಡಿ ವಿಗ್ರಹದ ಸಮ್ಮುಖದಲ್ಲಿ ದೀನ ಮುದ್ರೆಯಿಂದ ಕುಳಿತನು. ದೇವಿಯು ಪ್ರತ್ಯಕ್ಷಳಾಗಿ, ಭಕ್ತಶ್ರೇಷ್ಠನೆ ಎಂದು ಕೂಗಿದಳು. ಚಾಂದನು ಮತ್ತೆ ಪ್ರಣಿಪಾತ ಮಾಡಿದನು).

**ದೇವಿ:**— ವತ್ಸ, ಏಳು. ಶಾಂತನಾಗು. ನಾನು ನಿನ್ನ ಮನೋವ್ಯಥೆಯನ್ನು ಬಲ್ಲೆನು. ಆದರೆ ಈಗ ನೀನು ಇದನ್ನು ಸ್ಥಿರತೆಯಿಂದ ಸಹಿಸಿಕೊಳ್ಳಲೆಬೇಕು. ಹೀಗೆ ಮಾಡಿದರೇನೇ ನೀನು ಗೌರವಾನ್ವಿತನಾಗುವೆ! ಹೆಚ್ಚಳವನ್ನು ಪಡೆಯುವೆ! ಬುದ್ಧಿವಂತನು ನೀನು. ಮಹೇಶ್ವರನ ಪರಮಭಕ್ತನು ನೀನು. ಇಂತಹ ನೀನು ಸಾಮಾನ್ಯರಂತೆ ವರ್ತಿಸಿದರೆ ಹೇಗೆ? ವ್ಯಥೆಗೊಂಡು ಶೋಕಾಭಿಭೂತನಾಗಿ ನಿರ್ವಿಣ್ಣನಾದರೆ ಸಾಮಾನ್ಯರಿಗೂ ನಿನಗೂ ಭೇದವೇನು? ಕ್ಲೈಬ್ಯವನ್ನು ತ್ಯಜಿಸು. ಹೃದಯದೌರ್ಬಲ್ಯವನ್ನು ದೂರಸರಿಸಿ ಪ್ರತಿಜ್ಞಾಪಾಲನೆಗೆ ಮುಂದರಿ.

**ಚಾಂದ:**— ದೇವಿ, ಕ್ಷಮಿಸು. ಈಗಳಿನ ಮನೋವೇದನೆಯನ್ನು ಸಹಿಸುವ ಶಕ್ತಿಯು ನನಗಿಲ್ಲ! ಪ್ರತಿಜ್ಞಾಪಾಲನೆಗೆ ಮುಂದರಿಯುವ ತ್ರಾಣವು ನನ್ನಲ್ಲುಳಿದಿಲ್ಲ! ಇನ್ನು ನನಗೇನೂ ಬೇಕಿಲ್ಲ! ಒಂದೇ ಒಂದು ವರವನ್ನು ದಯಪಾಲಿಸು. ಜನ್ಮಾರಭ್ಯ ನಾನು ನಿಮ್ಮೀರ್ವರನ್ನೆ ನಂಬಿ, ನಿಮ್ಮಲ್ಲಿಯೆ ನಿಷ್ಠೆಯಿರಿಸಿ ಪೂಜಿಸುತ್ತ ಬಂದಿರುವೆನು. ನೀವು ನನ್ನ ಪೂಜೆಯಿಂದ ಸಂತುಷ್ಟರಾಗಿದ್ದರೆ—ನಾನು ಏಕನಿಷ್ಠೆಯಿಂದ ಮಾಡಿದ ಪೂಜೆಯು ನಿಮಗೆ ತೃಪ್ತಿಕರವಾಗಿದ್ದರೆ, ಅಮ್ಮಾ, ಒಂದೇ ಒಂದು ವರವನ್ನು ಕರುಣಿಸು! ನನಗೆ ಮತ್ತೇನೂ ಬೇಡ!

**ದೇವಿ:**—ಅದಾವ ವರ? ಕೇಳಿಕೊಳ್ಳು.

**ಚಾಂದ:**—ಅಮ್ಮಾ, ನನಗೆ ಬೇಕಾದ್ದು ಮರಣ! ಮರಣವನ್ನುಳಿದು ಬೇರೇನೂ ಬೇಡ!

**ದೇವಿ:**—ಭ್ರಾಂತನಾಗಿರುವೆ! ನನ್ನ ಪರಮಭಕ್ತನೂ ಧೀರಾಗ್ರೇಸರನೂ ಆದ ನಿನಗೆ ಈ ಗ್ಲಾನಿಯು ಸಲ್ಲದು!

**ಚಾಂದ:**—ಅಮ್ಮಾ, ಏನು ಮಾಡಲಿ? ನಿರುಪಾಯನಾಗಿದ್ದೇನೆ! ಷಟ್ಪುತ್ರರ ಏಕಕಾಲಿಕ ಆಕಸ್ಮಿಕ ಮರಣದಿಂದುಂಟಾದ ತಾಪವು ಹೃದಯವನ್ನು ದಹಿಸುತ್ತಿದೆ! ಈ ಹೃದಯದಾಹವು ಅಸಹನೀಯವು! ಮಕ್ಕಳಿಲ್ಲದ ಮನೆಯಲ್ಲಿ ಇನ್ನು ನಾನು ಹೇಗೆ ಇರಲಿ? ಯಾರಿಗಾಗಿ ಸಂಸಾರವನ್ನು ಸಾಗಿಸಲಿ? ಇನ್ನು ಧನ-ಕನಕಗಳಿಂದಾಗಲಿ, ರಾಜ್ಯದಿಂದಾಗಲಿ ಪ್ರಯೋಜನವೇನು? ಶೂನ್ಯಹೃದಯನಾಗಿ ಸಂಸಾರದಲ್ಲಿ ವ್ಯವಹರಿಸುವದು ನನ್ನಿಂದಾಗದು!

**ದೇವಿ:**—ವತ್ಸ, ಇದು ನಿನ್ನ ಪರೀಕ್ಷೆಯ ಸಮಯ. ಸುವರ್ಣವು ಒರೆಗಲ್ಲಿಗೆ ತಿಕ್ಕಿಕೊಂಡು ಪರೀಕ್ಷಿತವಾದ ಬಳಿಕ ಹೆಚ್ಚು ಬೆಲೆಗಾಣುವಂತೆ ನೀನು ಈ ಪ್ರಸಂಗದಲ್ಲಿ ಸ್ಥೈರ್ಯದಿಂದ ಪಾರಾಗಿ ಕೀರ್ತಿಮಂಡಿತನಾಗಬೇಕಾಗಿದೆಯೆಂಬುದನ್ನು ಮರೆಯದಿರು!

**ಚಾಂದ:**— ಮರೆದಿಲ್ಲ. ಆದರೆ ಒದಗಿದ್ದ ಅನರ್ಥಪರಂಪರೆಗಳಿಂದ ಕಂಗೆಟ್ಟು ಹೋಗಿದ್ದೇನೆ! ಮುಂದೇನು ಮಾಡಬೇಕೆಂಬುದು ನನಗೆ ಹೊಳೆಯದಾಗಿದೆ!

**ದೇವಿ:**—ಮೋಹವಶನಾದ ಮಾನವನಿಗೆ ಹೀಗೆ ದಿಗ್ಭ್ರಾಂತಿಯುಂಟಾಗುವದು ಸ್ವಾಭಾವಿಕವು. ಆದರೆ ವಿವೇಕಿಯು ತನಗುಂಟಾದ ಆ ಭ್ರಮೆಯನ್ನು ಬಹುಕಾಲ ಇರಗೊಡುವದಿಲ್ಲ. ಕ್ಷಣಕಾಲದಲ್ಲಿಯೆ ಆ ಭ್ರಾಂತಿಯನ್ನು ಹೊಡೆದೋಡಿಸಿ ಸತ್ಕಾರ್ಯಪ್ರವೃತ್ತನಾಗುವನು. ಹಾಗೆಯೆ ನೀನೂ ಉಂಟಾದ ಗ್ಲಾನಿಯನ್ನು ಹೋಗಲಾಡಿಸು. ದೇವಾಧಿದೇವನಾದ ಮಹಾದೇವನಲ್ಲಿಯೂ ನನ್ನಲ್ಲಿಯೂ ಅಚಲ ವಿಶ್ವಾಸವಿರಿಸು. ನಿನ್ನ ಹಿತವು ನಿನಗಿಂತಲೂ ನಮಗೆ ಚನ್ನಾಗಿ ಹೊಳೆಯುತ್ತಿದೆಯೆಂಬದನ್ನು ನಂಬಿದವನಾಗಿ, ಒದಗುತ್ತಿರುವುದೆಲ್ಲವೂ ನಮ್ಮ ಕಾಣಿಕೆಯೆಂದು ಭಾವಿಸಿ, ಸಂತೋಷದಿಂದ ಪರಿಗ್ರಹಿಸು.

**ಚಾಂದ:**—ಅಮ್ಮಾ, ನಾನು ನಿಮ್ಮಿರ್ವರ ಹೊರತು ಅನ್ಯದೇವರನ್ನರಿಯೆನು! ನಾನು ಎಂದೆಂದಿಗೂ ನಿಮ್ಮಿರ್ವರಲ್ಲಿ ನಿಶ್ಚಲಭಕ್ತಿಯನ್ನಿರಿಸಿದವನು. ಹೀಗಿರಲು ನೀವು ನನಗೆ ಇಂತಹ ದುಸ್ಸಮಯವನ್ನೇಕೆ ಒದಗಿಸಬೇಕು? ನಾನು ಸಂಕಟಪರಂಪರೆಗಳಿಗೆ ಏಕೆ ಒಳಗಾಗಬೇಕು?

**ದೇವಿ:**—ವತ್ಸ, ನಾವು ನಿನ್ನನ್ನು ಪರೀಕ್ಷಿಸಬೇಕೆಂದಿರುವೆವು. ಸಂಕಟಗಳು ಒದಗದ ಹೊರತು ಮನುಷ್ಯನ ಪರೀಕ್ಷೆಯಾಗದು. ನೀನು ನಿನ್ನ ಈ ಪರೀಕ್ಷೆಯ ಸಮಯದಲ್ಲಿ ಏಕನಿಷ್ಠಭಕ್ತಿಯನ್ನು ಕಳೆದುಕೊಂಡರೆ, ಸತ್ವಭ್ರಷ್ಟನಾಗಿ ಹೋಗುವೆ! ನಮ್ಮ ಭಕ್ತನೆಂದು ಹೇಳಿಕೊಳ್ಳಲಿಕ್ಕೆ ಮೋರೆಯಿಲ್ಲದವನಾಗುವೆ!

**ಚಾಂದ:**—ಅಮ್ಮಾ, ನಾನೆಂದಿಗೂ ಹೀಗಾಗಗೊಡೆನು!

**ದೇವಿ:**—ರಾಜನೆ, ನೀನು ಅಂಧನಾಗಿಹೋಗಿರುವೆ! ಅರಮನೆಯಲ್ಲಿ ನಡೆದಿರುವ ವ್ಯವಹಾರವೆ ನಿನಗೆ ಕಾಣದಾಗಿರುವಾಗ, ನೀನು ನಿನ್ನ ರಾಜ್ಯದಲ್ಲಿ ಸರಿಯಾದ ವ್ಯವಸ್ಥೆಯಿಡುವದೆಂತು? ಅರಮನೆಯಲ್ಲಿಯೆ ಮನಸೆಯ ಮಂಗಲ ಘಟವು ಸ್ಥಾಪಿತವಾಗಿದೆ. ಮನಸೆಯು ಪೂಜೆಹೊಂದುತ್ತಿದ್ದಾಳೆ. ಅನಾರ್ಯರ ಸರ್ಪದೇವತೆಯ ಪೂಜೆಯು ಹರಪಾರ್ವತಿಯರ ಭಕ್ತಾಗ್ರೇಸರನಾದ ನಿನ್ನ ಅರಮನೆಯಲ್ಲಿ ಜರಗಬೇಕೆ? ನಾನು ಇನ್ನು ಇಲ್ಲಿದ್ದು ನಿನ್ನ ಅರಮನೆಯಲ್ಲಿ ನಡೆಯುತ್ತಿರುವ ಮನಸೆಯ ಪೂಜೆಯ ಸಡಗರವನ್ನು ನೋಡಲಾರದವಳಾಗಿರುವೆನು. ಇದೊ, ನಾನಿನ್ನು ನಿನ್ನ ಈ ಮಂದಿರವನ್ನು ಬಿಟ್ಟುಹೊರಟೆನು! (ಅಂತರ್ಧಾನಳಾಗುವಳು).

**ಚಾಂದ:**—ಅಮ್ಮಾ ಕೋಪಗೊಳ್ಳದಿರು! ಹೊರಡದಿರು! ನಾನು ನನ್ನ ಅರಮನೆಯಲ್ಲಿ ಅನಾರ್ಯ ಮನಸೆಯ ಪೂಜೆಯನ್ನೆಷ್ಟುಮಾತ್ರಕ್ಕೂ ನಡೆಯಗೊಡತಕ್ಕವನಲ್ಲ!

(ಮೋರೆಯೆತ್ತಿ ನೋಡುವನು. ದೇವಿಯು ಕಾಣದಿರುವುದರಿಂದ ವ್ಯಥಿತನಾಗಿ ಬಿದ್ದುಕೊಳ್ಳುವನು. ಕೆಲಕಾಲದ ಮೇಲೆ ಸನಕೆಯು ಬರುವಳು.)

**ಸನಕೆ:**—ಪ್ರಾಣನಾಥ, ಹೀಗೆ ಮಲಗಿರುವಿರೇಕೆ? ಏಳಿರಿ. (ಚಾಂದನು ಸುಮ್ಮನಿರುವನು) ಏಳಿರಿ. ಅಂತಃಪುರಕ್ಕೆ ನಡೆಯಿರಿ. ಇಂದು ಮುಂಜಾವಿ

ನಿಂದಲೂ ನೀವು ಆಹಾರವನ್ನು ತಕೊಳ್ಳುಂಡಿಲ್ಲ. ದುಶ್ಚಿಂತೆಯಲ್ಲಿ ಹೀಗೆ ಮೈಮರೆತರೆ ಹೇಗೆ?

**ಚಾಂದ**:—ರಾಜ್ಞೀ, ಅರಮನೆಯು ಅಪವಿತ್ರವಾಗಿದೆ! ನಾನು ಈ ಮನೆಯಲ್ಲಿದ್ದು ಜಲಸ್ಪರ್ಶವನ್ನು ಸಹ ಮಾಡಲಾರೆನು!

**ಸನಕೆ**:-ಅರಮನೆಯು ಅಪವಿತ್ರವಾಗಿದೆಯೆ? ಹೀಗೆ ಮಾತಾಡಿದರೆ ಏನೆನ್ನಬೇಕು? ಅನಾಹಾರದಿಂದಲೂ ದುಶ್ಚಿಂತೆಯಿಂದಲೂ ನೀವು ಹುಚ್ಚರಂತಾಗಿರುವಿರಿ. ಮನೆಯೊಳಗೆ ನಡೆಯಿರಿ. ಆಹಾರವನ್ನು ಸ್ವೀಕರಿಸಿರಿ ವಿಶ್ರಮಿಸಿರಿ.

**ಚಾಂದ**:—ಒಲ್ಲೆ. ಆಹಾರವು ನನಗೆ ಬೇಕಿಲ್ಲ! ನಾನು ಹುಚ್ಚನಾಗಿಲ್ಲ! ಇನ್ನೂ ನನ್ನ ಬುದ್ಧಿ ಮಸಣಿಸಿಲ್ಲ! ನಿಜವಾಗಿಯೂ ಈ ಮನೆಯು ಅಪವಿತ್ರವಾಗಿದೆ. ಗೃಹದೇವತೆಯಾದ ಚಂಡೀದೇವಿಯು ಅಶುದ್ಧವಾದ ಈ ಮಂದಿರದಲ್ಲಿರದವಳಾಗಿ ಹೊರಟುಹೋದಳು. ಆರಕ್ಷಣದಲ್ಲಿ ಮಹಾದೇವನೂ ಈ ಮಂದಿರವನ್ನು ತೊರೆದು ಸತಿಯನ್ನು ಹಿಂಬಾಲಿಸಿ ಹೊರಡುವನು! ಪಾರ್ವತೀಪರಮೇಶ್ವರರ ವಾಸ್ತವ್ಯದಿಂದ ವಂಚಿತವಾದ ಈ ಮನೆಯಲ್ಲಿ ನಾನಿರಲಾರೆನು! ಊಟಮಾಡಲಾರೆನು! ವಿಶ್ರಾಂತಿಯನ್ನನುಭವಿಸಲಾರೆನು!

**ಸನಕೆ**:—ನಿಮ್ಮ ಈ ತರದ ಮಾತುಗಳಿಗೆ ನಾನು ಏನೆಂದು ಉತ್ತರ ಕೊಡಲಿ? ನಿಮ್ಮನ್ನು ಹೇಗೆ ಸಂತಯಿಸಲಿ?

**ಚಾಂದ**:—ರಾಜ್ಞೀ, ಮಾತು ಬೆಳಿಸಿ ನನ್ನ ಕೋಪವನ್ನು ಹೆಚ್ಚಿಸಬೇಡ! ನನ್ನ ತಲೆ ತಿರುಗಹತ್ತಿದೆ! ಉಸಿರು ಕಟ್ಟುವದರಲ್ಲಿದೆ! ನಾನು ಹೀಗೆಯೆ ಕೆಲಕಾಲ ಇಲ್ಲಿ ಬಿದ್ದುಕೊಂಡಿರಬೇಕೆಂದಿದ್ದೇನೆ! ನೀನು ಸುಮ್ಮನೆ ಹೋಗಿ ಬಿಡು!

**ಸನಕೆ**:—ಪ್ರಿಯತಮ, ಹೀಗೆ ಮಾತಾಡಬೇಡಿರಿ! ನಿಮ್ಮನ್ನು ಈ ಸ್ಥಿತಿಯಲ್ಲಿ ಬಿಟ್ಟು ನಾನು ಹೇಗೆ ಹೋಗಲಿ? ನನ್ನೊಡನೆ ನಡೆಯಿರಿ. ನಾನು ನಿಮ್ಮನ್ನು ಕರೆದೊಯ್ದು ಅಂತಃಪುರದಲ್ಲಿ ಮಲಗಿಸುವೆನು.

**ಚಾಂದ**:—ನಾನೊಲ್ಲೆನು!

**ಸನಕೆ**:—ಪಾರ್ವತೀಪರಮೇಶ್ವರರು ಕುಪಿತರಾಗಿದ್ದರೆ, ಅವರ ಪ್ರಸನ್ನತೆಗಾಗಿ ಷೋಡಶೋಪಚಾರ ಪೂಜೆ ಮಾಡಿಸುವೆನು. ಭಕ್ತಿಭರದಿಂದ ಪ್ರಾರ್ಥಿಸಿ

ಕೊಂಡು ಮತ್ತೆ ಅವರು ನಮ್ಮ ಮೇಲೆ ಕೃಪಾವಶರಾಗುವಂತೆ ಮಾಡುವೆನು. ನೀವು ದೇವತಾಕ್ಷೋಭವನ್ನು ನೆನೆದು, ಆಹಾರ-ವಿಹಾರಗಳನ್ನು ಬಿಟ್ಟರೆ ಆಗುವದೇನು ? ಒಲ್ಲೆನೆಂದೆನ್ನಬೇಡಿರಿ. ಏಳಿರಿ. ನನ್ನ ವಿಜ್ಞಾಪನೆಯನ್ನು ಮನ್ನಿಸಿರಿ. ಪ್ರಾಣನಾಥ, ನಾನು ನಿಮಗೆ ಒಂದು ಸಂತೋಷದ ಸಂಗತಿಯನ್ನು ಹೇಳಬೇಕಾಗಿದೆ. ಊಟದ ತರುವಾಯ ವಿಶ್ರಾಂತಿಯ ಸಮಯದಲ್ಲಿ ನಾನು ಈ ಸಂಗತಿಯನ್ನು ನಿಮಗೆ ಹೇಳುವೆನು.

**ಚಾಂದ**:—ನಾನು ಇಲ್ಲಿಂದ ಏಳುವದೂ ಬೇಡ ! ನೀನು ಆ ಸಂತೋಷದ ಸಂಗತಿಯನ್ನು ಹೇಳುವದೂ ಬೇಡ ! ಸುಮ್ಮನೆ ಹೋಗಿ ಬಿಡು !

**ಸನಕೆ**:—ಆರು ಮಕ್ಕಳ ಮರಣದ ತರುವಾಯದಲ್ಲಿ ನಾನು ಮತ್ತೆ ಬಸಿರಾಗಿದ್ದೇನೆ. ಶೂನ್ಯವಾದ ಅರಮನೆಯಲ್ಲಿ ಮತ್ತೆ ಪುತ್ರೋತ್ಸವದ ಸಡಗರವೇಳುವದೆಂದು ಸಂತೋಷಿಸಿದ್ದೇನೆ. ನೀವು ಹೀಗೆ ಮಾತಾಡಿ ನನ್ನ ಮನಸ್ಸನ್ನು ನೋಯಿಸಬೇಡಿರಿ ! ಭಾವೀ ಸಂತಾನದ ಅಮಂಗಲವನ್ನು ಸೂಚಿಸಬೇಡಿರಿ ! ನಿಮಗೆ ನನ್ನಾಣೆಯಿದೆ ! ಗರ್ಭಸ್ಥ ಶಿಶುವಿನ ಆಣೆಯಿದೆ ! ಅಂತಃಪುರಕ್ಕೆ ಹೊರಡಿರಿ !

**ಚಾಂದ**:—( ಚಮಕಿತನಾಗಿ ) ಬೇಡ ! ಇನ್ನು ಆ ಮಾಯೆಯಿಂದ ಪ್ರಯೋಜನವಿಲ್ಲ! ಮೋಹವಶನಾಗಿ ಉಪಯೋಗವಿಲ್ಲ. ಮಹಾಜ್ಞಾನವಿಲ್ಲ! ಧನ್ವಂತರಿ ಗುರುಗಳಿಲ್ಲ ! ಇನ್ನು ಮಕ್ಕಳನ್ನು ಬಯಸುವದರಲ್ಲಿ ಸ್ವಾರಸ್ಯವಿಲ್ಲ ! ಮಹಾಜ್ಞಾನವನ್ನು ಕಳೆದುಕೊಂಡು ಶಕ್ತಿಹೀನನಾದ ನಾನು-ಗುರುಗಳ ರಕ್ಷಾ ಕವಚದಿಂದ ವಂಚಿತನಾಗಿ ಅಸಹಾಯನಾಗಿದ್ದ ನಾನು-ಗೃಹಾಧಿಷ್ಠಿತ ಪಾರ್ವತೀಪರಮೇಶ್ವರರ ದಯವಿದೆಯೆಂದು ಬಗೆದು ಇದುವರೆಗೆ ಒಂದು ಬಗೆಯಿಂದ ಸಮಾಧಾನ ಹಚ್ಚಿಕೊಂಡಿದ್ದೆನು. ಆದರೆ ಇಂದು ಆ ಪಾರ್ವತೀಪರಮೇಶ್ವರರೂ ನನ್ನ ವಿಷಯದಲ್ಲಿ ನಿರ್ದಯರಾಗಿದ್ದಾರೆ ! ಇನ್ನು ನಾನು ಹೇಗೆ ಜೀವಿಸಲಿ ? ಸುಖದ ಆಶೆಯನ್ನೆಂತು ಮಾಡಲಿ ?

**ಸನಕೆ**:— ಪಾರ್ವತೀಪರಮೇಶ್ವರರು ಇಂದು ಕುಪಿತರಾಗಿರುವರೆಂದು ಬಾರಿಬಾರಿಗೆ ಅನ್ನುತ್ತಿರುವಿರಿ ! ಯಾವ ಕಾರಣಕ್ಕಾಗಿ ನೀವು ಹೀಗೆ ಅನ್ನುತ್ತಿರುವಿರಿ ? ಪಾರ್ವತೀಪರಮೇಶ್ವರರು ನಮ್ಮ ಮೇಲೆ ಸಿಟ್ಟಾಗಿರುವದೇಕೆ ?

**ಚಾಂದ:**—ಕಾರಣವನ್ನು ಹೇಳಲೇಬೇಕೆ? ಹೇಳುವೆನು, ಕೇಳು. ಕುರುಡ ಮನಸೆಯ ಮಂಗಲ ಘಟವು ಪೂಜೆಗೊಳ್ಳುವ ಮನೆಯಲ್ಲಿ ಪಾರ್ವತೀಪರಮೇಶ್ವರರು ಇರಲಾರರು! ನಾನು ಕುರುಡ ಮನಸೆಯ ಪೂಜೆಯನ್ನೆಂದೂ ಮಾಡೆನೆಂದು ಆಶ್ವಾಸನವಿತ್ತೇ ಈ ಮನೆಯಲ್ಲಿ ಪಾರ್ವತೀಪರಮೇಶ್ವರರ ಮೂರ್ತಿಗಳನ್ನು ಪ್ರತಿಷ್ಠಾಪಿಸಿದ್ದೆನು. ಪೂಜೆಯನ್ನು ಮಾಡಿ, ದೇವಾನುಗ್ರಹವನ್ನು ಸಂಪಾದಿಸಿದ್ದೆನು. ಆದರೆ ಇಂದು ನನ್ನ ಆ ಆಶ್ವಾಸನವು ನಿರರ್ಥಕವಾಗಿದೆ. ನನ್ನ ಈ ಗೃಹದಲ್ಲಿ—ಪಾರ್ವತೀಪರಮೇಶ್ವರರು ಚಿರವಾಸ್ತವ್ಯ ಹೂಡಿದ್ದ ಈ ಅರಮನೆಯಲ್ಲಿ ಮನಸೆಯ ಮಂಗಲ ಘಟವು ಪ್ರವೇಶಿಸಿದೆ! ಪೂಜೆಗೊಂಡಿದೆ! ಇದರಿಂದ ಪಾರ್ವತೀಪರಮೇಶ್ವರರು ರೋಷಗೊಂಡು, ನನ್ನ ಮನೆ ಬಿಟ್ಟು ಹೊರಟಿದ್ದಾರೆ! ರಾಜ್ಞಿ, ಕಾರಣವು ತಿಳಿಯಿತೆ? (ಸನಕೆಯು ಚಮಕಿತಳಾಗಿ ನಿಲ್ಲುವಳು.) ರಾಜ್ಞಿ, ನನ್ನ ಅರಮನೆಯಲ್ಲಿ, ನನ್ನ ಅಪ್ಪಣೆಯ ವಿರುದ್ಧವಾಗಿ ಯಾರು ಮನಸೆಯ ಮಂಗಲ ಘಟವನ್ನು ಸ್ಥಾಪಿಸಿರಬಹುದು? ಯಾರು ಪೂಜಿಸಿರಬಹುದು? ನಿನಗೆ ಗೊತ್ತಿಲ್ಲವೆ? (ಸನಕೆಯು ಗದಗದ ನಡಗುತ್ತ ಸುಮ್ಮನಿರುವಳು.) ರಾಜ್ಞಿ, ನೀನು ಹೇಳದಿದ್ದರೂ, ನನಗೆ ಎಲ್ಲವೂ ಹೊಳೆದದೆ! ನನಗೆ ಅರಿಯದ್ದಾವುದೂ ಇಲ್ಲ! ನೀನು ನನ್ನ ಹೆಂಡತಿಯಲ್ಲ—ಕಾಲನಾಗಿಣಿಯು! ರಾಜ್ಞಿ, ಕಾಲಸರ್ಪದ ಸಹವಾಸದಲ್ಲಿ ಇನ್ನು ನಾನಿರಲಾರೆನು! ಯಾವನು ಮನಸೆಯೊಡನೆ ವಿರೋಧಬಳೆಸಿ ತನ್ನ ಸರ್ವಸ್ವವನ್ನು ಸೂರೆಗೊಂಡನೊ—ಮಹಾಜ್ಞಾನವನ್ನೂ, ಗುರುಗಳನ್ನೂ, ಷಟ್ಕುಮಾರರನ್ನೂ ಕಳೆದುಕೊಂಡನೊ ಅವನ ಸಹಧರ್ಮಿಣಿಯು ಅವನ ಅರಮನೆಯಲ್ಲಿ ಮನಸೆಯ ಪೂಜೆಗೆ ಉದ್ಯುಕ್ತಳಾಗಬೇಕೆ? ದೇವ, ಇನ್ನು ನನಗೆ ಹೆಂಡತಿ ಬೇಡ! ಮಗನು ಬೇಡ! ಅರಮನೆಯು ಬೇಡ! ರಾಜ್ಯವು ಬೇಡ! ನಾನು ದೇಶಾಂತರ ಹೊರಡುವೆನು, ರಾಜ್ಞಿ, ಇನ್ನು ನೀನು ಮನಸೆಯ ಪೂಜೆಯನ್ನು ನಿಷ್ಕಂಟಕ ರೀತಿಯಿಂದ ಮಾಡಿ ಅವಳ ಅನುಗ್ರಹವನ್ನು ಸಂಪಾದಿಸಿ ಪುತ್ರರತ್ನವನ್ನು ಪಡೆದು ಸುಖಿಸು! ಇದೊ, ನಾನು ಹೊರಟೆನು!

(ಚಾಂದನು ರಭಸದಿಂದ ಹೊರಟನು. ಸನಕೆಯು ಅವನ ಕಾಲಮೇಲೆ ಬೀಳುವಳು)

**ಸನಕೆ:**—ಪ್ರಾಣನಾಥ, ಹೀಗೆ ಹೊರಡಬೇಡಿರಿ! ನಿಲ್ಲಿರಿ! ಈ ಅಬಲೆಯ ಮೇಲೆ ದಯದೋರಿರಿ!

**ಚಾಂದ**:— ದಯಮೋರಬೇಕೆ? ಬಾ. ತೋರಿಸುವೆನು! (ಅವಳನ್ನು ಕರೆದೊಯ್ದು ಅಂತಃಪುರವನ್ನು ಪ್ರವೇಶಿಸುವನು. ಮುಂದೆ ಹೋಗಿ ಮನಸೆಯ ಮಂಗಲಘಟವನ್ನು ತಂದು) ರಾಜ್ಞಿ, ಇದೇನು ನೋಡಿದಿಯಾ? ಇದನ್ನಾರು ಸ್ಥಾಪಿಸದರು? ಪೂಜಿಸಿದರು? ಹೇಳು! (ಸನಕೆಯು ಸುಮ್ಮನಿರುವಳು) ಇದು ನಿನ್ನ ಕೆಲಸವಲ್ಲವೇ?

**ಸನಕೆ**:— ಪ್ರಿಯತಮ, ಶಾಂತರಾಗಿರಿ. ಈಗ ನಾನು ಉತ್ತರವನ್ನು ಕೊಡಲಾರೆನು.

**ಚಾಂದ**:— ಈಗಲೇ ಹೇಳಲಿಕ್ಕೆ ಬೇಕು! ನೀನು ಸರಿಯಾದ ಉತ್ತರವನ್ನು ಕೊಡದಿದ್ದರೆ, ನಾನೀ ಕಲಶವನ್ನು ಬಿಸಾಟಿ ಚೂರುಚೂರು ಮಾಡಿಬಿಡುವೆನು! (ಬಿಸಾಟ ಹೋಗುವನು. ಸನಕೆಯು ಧಾವಿಸಿ ಬಂದು ತಡೆಯುವಳು.)

**ಸನಕೆ**:— ಪ್ರಾಣನಾಥ, ಮನಸಾದೇವಿಯ ಮಂಗಲಘಟದ ಅವಮಾನ ಮಾಡಬೇಡಿರಿ! ಭಾವೀ ಸಂತಾನದ ಅನಿಷ್ಟವನ್ನು ಬಯಸಬೇಡಿರಿ!

**ಚಾಂದ**:— ಏನು, ಮಂಗಲಘಟದ ಅವಮಾನವಾಗಕೂಡದೆ? ಮನಸೆಯ ಪೂಜೆಗೆ ವಿಘ್ನವಾಗಬಾರದೆ? (ಕಲಶವನ್ನು ಕೆಳಗಿರಿಸಿ) ಯಾರಲ್ಲಿ? ದೌವಾರಿಕ!

**ಸೇವಕ**:— ಮಹಾಪ್ರಭುಗಳೇ, ಅಪ್ಪಣೆಯೇನು?

**ಚಾಂದ**:— ಯಾವನೇ ಆಗಲಿ, ಮನಸೆಯ ಮಂಗಲಘಟವನ್ನು ಕಾಣುತ್ತಲೆ ಅದನ್ನು ಹೀಗೆ ಕಾಲಿನಿಂದೊದ್ದು ಚೂರುಚೂರಾಗಿ ಮಾಡಿಯೇ ತೀರಬೇಕೆಂದೂ, ಇಲ್ಲವಾದರೆ ಅವನು ಭಯಂಕರ ಶಿಕ್ಷೆಗೆ ಗುರಿಯಾಗುವನೆಂದೂ ರಾಜ್ಯದಲ್ಲೆಲ್ಲ ಡಂಗುರ ಹೊಯಿಸಲಿಕ್ಕೆ ನಗರರಕ್ಷಕನಿಗೆ ತಿಳುಹಿ ಬಾ. ಕಲಶವನ್ನು ಕಾಲಿನಿಂದೊದ್ದು ಚೂರುಚೂರು ಮಾಡುವನು. ಸೇವಕನು ಆಜ್ಞಾಪಾಲನೆಗೆ ಹೊರಟು ಹೋದನು.)

**ಸನಕೆ**:— ಅಯ್ಯೋ, ಏನು ಮಾಡಿಬಿಟ್ಟಿರಲ್ಲ! (ಮೂರ್ಛಿತಳಾಗಿ ಬೀಳುವಳು).

**ಚಾಂದ:—** ಹಾ ಹಾ ಹಾ (ವಿಕಟಹಾಸ್ಯ ಮಾಡುವನು) ಕುರುಡ ಮನಸೆಯ ಪೂಜೆ ಮಾಡಿದರೆ, ಮಗನು ಹುಟ್ಟುವನು! ಸುಂದರಾಕೃತಿಯ ಸುಕುಮಾರನು ದಯಿಸುವನು! ಮಡಿದು ಹೋಗಿದ್ದ ಆರು ಮಕ್ಕಳ ವಿಯೋಗದುಃಖವನ್ನು ಮರಿಸುವನು! ಅಲ್ಲವೆ? ಅಂತೆಯೆ ನಾನಿಂದು ಆ ಕುರುಡ ಮನಸೆಯ ಪೂಜೆಯನ್ನು ಇಂತು ಮಾಡಿದೆನು! ರಾಜ್ಞಿ, ಪೂಜೆಯು ಹೇಗಾಯಿತು? ನೋಡಿದೆಯಾ! ನಾನು ಇಷ್ಟರಿಂದಲೇ ತಣಿಯುವವನಲ್ಲ! ದೇಶವಿದೇಶಗಳಲ್ಲಿ ಎಲ್ಲೆಲ್ಲಿಯೂ ಕುರುಡ ಮನಸೆಯ ಪೂಜೆಯು ಹೀಗೆಯೆ ಜರುಗುವದಕ್ಕಾಗಿ ಪ್ರಯತ್ನಿಸುವೆನು! ಈ ಕಾರ್ಯಸಾಧನೆಗಾಗಿ ನಾನು ಇಂದೇ ವ್ಯಾಪಾರಕ್ಕೆ ಹೊರಡುವೆನು. ಹೋದ ಹೋದಲ್ಲಿ ಮನಸೆಯ ಪೂಜೆಯನ್ನು ಹೀಗೆ ಮಾಡಿರೆಂದು ಜನರಿಗೆ ಆಜ್ಞಾಪಿಸುವೆನು. ಬೋಧಿಸುವೆನು.

**ಸನಕೆ:—** (ಮೂರ್ಛೆಯಿಂದೆಚ್ಚತ್ತು) ಪ್ರಾಣನಾಥ,

**ಚಾಂದ:—** ಮಾತಾಡಬೇಡ! ಸುಮ್ಮನಿರು! ಇನ್ನು ನಿನ್ನ ಮಾತನ್ನು ಕೇಳುವ ಇಚ್ಛೆ ನನಗಿಲ್ಲ! ಧಮಪತ್ನಿಯು ನೀನು! ಸಹಧರ್ಮಿಣಿಯು ನೀನು! ಪತ್ನಿಯ ಧರ್ಮಕಾರ್ಯಕ್ಕೆ ಸಹಾಯಕಳು ನೀನು! ಇನ್ನು ನಿನ್ನ ಸಹವಾಸವು ನನಗೆಬೇಡ! ನಾನಿನ್ನು ಕ್ಷಣಸಹ ನಿನ್ನ ನೆರಳಿನಲ್ಲಿ—ಈ ಅರಮನೆಯಲ್ಲಿ—ಇರಲೊಲ್ಲೆನು! ಮಧುಕರ ಹಡಗವನ್ನೇರಿ ವಾಣಿಜ್ಯಯಾತ್ರೆಗೆ ಹೊರಡುವೆನು.



# ಎರಡನೆಯ ಅಂಕ

## ಮೊದಲನೆಯ ಪ್ರವೇಶ

(ನಿಧನಿ ನಗರದ ಅರಮನೆ. ಪುರೋಹಿತನೂ ಸಾಯುಸವದಾಗರನೂ ಇರುವರು.)

**ಪುರೋಹಿತ:—** ವಣಿಗ್ರಾಜನೇ, ವಾಣಿಜ್ಯಯಾತ್ರೆಯಿಂದ ಒಳ್ಳೆ ಸಮಯಕ್ಕೆ ತಿರುಗಿ ಬಂದಿರುವೆ. ನಿನ್ನ ಅವಿದ್ಯಮಾನವಲ್ಲಿ ಇಲ್ಲಿ ನಡೆದಿದ್ದ ಅನಾಹುತವನ್ನು ನೋಡಿ, ಅಮಂಗಲದ ಆಶಂಕೆಯಿಂದ ಬಹಳವಾಗಿ ಭಯ ಗೊಂಡಿದ್ದೆನು! ನಿನ್ನ ಆಗಮನದಿಂದ ಭಯದ ಬಹುಭಾಗವು ಕಡಿಮೆ ಯಾದಂತಾಯಿತು!

**ಸಾಯ ಸವದಾಗರ:—** ಗುರುಗಳೇ, ಮತ್ತೇನಾಯಿತು?

**ಪುರೋಹಿತ:—** ನಿನ್ನ ಈ ಅರಮನೆಯಲ್ಲಿ ನಿನ್ನಿನ ಹಾಗು ಇಂದಿನ ದಿನಗಳಲ್ಲಿ ಇಂದ್ರಪೂಜೆಯ ವಾರ್ಷಿಕೋತ್ಸವವು ನಡೆಯಬೇಕೆಂಬುದನ್ನು ನೀನು ಒಲ್ಲೆ. ಉತ್ಸವವು ನಿನ್ನಿನ ದಿವಸ ನಡಿಯಲಿಲ್ಲ. ಇಂದಿನ ದಿನದಲ್ಲೂ ಜರುಗು ವಂತೆ ಕಾಣುವದಿಲ್ಲ. ಇದರಿಂದ ದೇವತೆಗಳ ಕ್ಷೋಭವುಂಟಾಗದಿದ್ದೀತೆ? ನೋಡು, ಮಳೆಗಾಲದ ಮಧ್ಯ ಸಮಯವಿದು! ಒಂದು ಹನಿ ಮಳೆ ಸಹ ಇಲ್ಲ! ಆಕಾಶವು ನಿರಭ್ರವಾಗಿದೆ. ಭಯಂಕರ ಬಿಸಿಲಿನಿಂದ ಜನರು ತತ್ತರಿಸುತ್ತಿದ್ದಾರೆ. ಕುಡಿಯಲಿಕ್ಕೆ ಸಹ ನೀರು ದೊರೆಯದಂತಾಗಿದೆ. ನಾಗರಿಕರು ಅನಾವೃಷ್ಟಿಯ ಆಶಂಕೆಯಿಂದ ಬೆದರಿಹೋಗಿದ್ದಾರೆ.

**ಸಾಯ:—** ಇಂದ್ರಪೂಜೆಯ ಉತ್ಸವವನ್ನೇಕೆ ನೆರವೇರಿಸಲಿಲ್ಲ? ನಿಮಗೆ ಪ್ರತಿಬಂಧಮಾಡಿದವರಾರು? ಗುರುಗಳಾಗಿದ್ದ ನೀವು ಇಲ್ಲಿದ್ದು ಉತ್ಸವ ವನ್ನು ಮಾಡದೆ ಅನರ್ಥವನ್ನು ತಂದುಕೊಂಡಿರೇಕೆ?

**ಪುರೋಹಿತ:—** ಅನರ್ಥವನ್ನುಂಟುಮಾಡಿದವನು ನಾನಲ್ಲ! ನಿನ್ನ ಮಗಳು!

**ಸಾಯ:—** ನನ್ನ ಮಗಳೆ? ಬೇಹುಳೆಯೆ?

**ಪುರೋಹಿತ:**— ಅಹುದು. ನಿನ್ನ ಆದರದ ಅಣುಗೆಯಾದ ಬೇಹುಳಿಯೆ ಈ ಅನರ್ಥಕ್ಕೆ ಕಾರಣೀಭೂತಳಾಗಿರುವಳು.

**ಸಾಯು:**— ಅದು ಹೇಗೆ ? ಅವಳೇನು ಮಾಡಿದಳು ?

**ಪುರೋಹಿತ:**— ರಾಜನೆ, ನಗರದ ಶ್ರೇಷ್ಠತಮ ನರ್ತಕಿಯು ನೃತ್ಯಾರತಿಯನ್ನು ಮಾಡುವದು ಇಂದ್ರಪೂಜೆಯ ಮುಖ್ಯಾಂಗವೆಂಬುದು ನಿನಗೆ ಗೊತ್ತುಂಟು.

**ಸಾಯು:**— ಇದಕ್ಕೂ ಬೇಹುಳೆಗೂ ಸಂಬಂಧವೇನು ?

**ಪುರೋಹಿತ:**— ಬೇಹುಳಿಯೆ-ನಿನ್ನ ಮಮತೆಯ ಮಗಳಾದ ಬೇಹುಳಿಯೆ- ನೃತ್ಯಾರತಿಯನ್ನು ಮಾಡಬೇಕಿತ್ತು. ಯಾಕೆಂದರೆ, ಹೋದ ವಸಂತೋತ್ಸವ ಸಮಯದಲ್ಲಿ ನಡೆದ ನೃತ್ಯದ ಮೇಲಾಟದಲ್ಲಿ ಬೇಹುಳಿಯೆ ಶ್ರೇಷ್ಠತಮ ನರ್ತಕಿಯೆಂದು ನಿರ್ಣಯಿಸಲ್ಪಟ್ಟಿದ್ದಾಳೆ.

**ಸಾಯು:**—ಬೇಹುಳಿಯು ನಿನ್ನಿನ ದಿವಸ ಸರಿಯಾಗಿ ನರ್ತನಮಾಡಲಿಲ್ಲವೇನು ? ಏನಾದರೂ ತಪ್ಪು ಮಾಡಿದಳೇನು ?

**ಪುರೋಹಿತ:**— ಸರಿಯಾಗಿ ನರ್ತನಮಾಡಲಿಕ್ಕೆ ಬರಲಿಲ್ಲವೆಂದಲ್ಲ- ನೃತ್ಯಾರತಿಯನ್ನು ಮಾಡಲಿಕ್ಕೆ ಸಮ್ಮತಿಸಲಿಲ್ಲ. ನಾನು ನರ್ತನಮಾಡುವದಿಲ್ಲೆಂದು ನಿರ್ಧಾರದಿಂದ ನುಡಿದುಬಿಟ್ಟಳು. ಇಂದಿನ ದಿನವೂ ಹಾಗೆಯೆ ಹೇಳಿಬಿಟ್ಟರೆ, ಅನರ್ಥವಾಗದಿರದು.

**ಸಾಯು:**— ಇಂದಿನ ದಿವಸ ಅವಳು ನಿಶ್ಚಯವಾಗಿಯೂ ನೃತ್ಯಾರತಿಯನ್ನು ಮಾಡುವಳು. ನೀವು ನಿಮ್ಮ ಮಗುಡವನ್ನು ಬಿಟ್ಟು ಉತ್ಸವಕ್ಕೆ ತೊಡಗಿರಿ. ನಾನು ಈಗಳೆ ಅವಳನ್ನು ಕರೆದು, ನೃತ್ಯಾರತಿಗೆ ಸಿದ್ಧಳಾಗೆಂದು ಸೂಚಿಸುವೆನು.

( ಸೇವಕನು ಬರುವನು. )

**ಸೇವಕ:**— ಮಹಾಪ್ರಭುವೆ, ನಗರದಲ್ಲಿ ಅನರ್ಥವೆದ್ದಿರುವದು.

**ಸಾಯ:**— ಅದೇನು ?

**ಸೇವಕ:**— ಒಬ್ಬನು ರಾಜಮಾರ್ಗದಲ್ಲಿ ಒಂದು ಹಾವನ್ನು ಕೊಂದು ಹಾಕಿರುವನು.

**ಸಾಯ:**— ಉತ್ಪಾತ ! ಭಯಂಕರ ಉತ್ಪಾತ ! ಸೇವಕನೆ, ಸರ್ಪ ಹತ್ಯಾಕಾರಿಯಾದ ಆ ದುಷ್ಟನನ್ನು ಬೇಗನೆ ಬಂಧಿಸಿ ತರಲಿಕ್ಕೆ ನಗರರಕ್ಷಕನಿಗೆ ತಿಳುಹು ! ನಾನು ಆ ದುರ್ವೃತ್ತನಿಗೆ ಸಂಕೋಲೆಗಳಿಂದ ಬಂಧಿಸಿ ಸರ್ಪದಂಶನ ದಿಂದ ಕೊಲ್ಲಿಸುವ ಶಿಕ್ಷೆಯನ್ನು ವಿಧಿಸುವೆನು ! ಹೋಗು. ಬೇಗನೆ ಹೋಗು ! (ಸೇವಕನು ಹೋಗುವನು) ಏನನರ್ಥವಿದು ! ನನ್ನ ರಾಜ್ಯದಲ್ಲಿ ಸರ್ಪಹತ್ಯೆ ಯಾಗಬೇಕೆ ? ಮನಸಾದೇವಿಯೆ, ಕ್ಷಮಿಸು. ( ಕೈಮುಗಿಯುವನು ) ಇದರಲ್ಲಿ ನನ್ನ ಅಪರಾಧವೇನೂ ಇಲ್ಲ ! ಗುರುಗಳೆ, ಮನಸಾದೇವಿಯು ನನ್ನನ್ನು ಕ್ಷಮಿಸ ಲಿಕ್ಕಿಲ್ಲವೆ ?

**ಪುರೋಹಿತ:**— ರಾಜನೆ, ಭಯಗೊಳ್ಳದಿರು. ಮನಸಾದೇವಿಯು ಸರ್ವಜ್ಞಳು. ನಗರದಲ್ಲಿ ನಡೆದ ಸರ್ಪಹತ್ಯೆಯಲ್ಲಿ ನಿನ್ನ ಅಪರಾಧವು ಲೇಶ ಮಾತ್ರವೂ ಇಲ್ಲ ! ಯಾಕೆಂದರೆ, ನೀನು ಹತ್ಯೆಮಾಡಿದವನಲ್ಲ ; ಬುದ್ಧಿಪೂರ್ವಕ ವಾಗಿ ಅನ್ಯರಿಂದ ಮಾಡಿಸಿದವನಲ್ಲ ! ನೀನು ಸರ್ಪಕುಲದ ಪರಿಮಹಿತೈಷಿಯು. ಸರ್ಪಗಳು ರಾಜ್ಯದಲ್ಲಿ ಸುಖದಿಂದಿರುವದಕ್ಕಾಗಿ ನೀನು ಸರ್ಪಗಳ ವೈರಿಗಳಾಗಿದ್ದ ನವಿಲುಗಳನ್ನೂ ಮುಂಗುಲಿಗಳನ್ನೂ ಧ್ವಂಸಮಾಡಿಸಿರುವೆ. ಇದರಿಂದ ಸರ್ಪಗಳು ನಿಷ್ಕಂಟಕವಾಗಿ ಸ್ವೇಚ್ಛಾಪ್ರವೃತ್ತಿಯಿಂದ ವಿಹರಿಸುತ್ತಲಿವೆ. ನಿನ್ನಂತಹ ಸರ್ಪ ಕುಲಹಿತಚಿಂತಕನ ವಿಷಯದಲ್ಲಿ ಮನಸಾದೇವಿಯು, ಎಂದಾದರೂ ಕೋಪ ಗೊಂಡಾಳೆ?

(ಬೇಹುಳೆಯು ಪ್ರವೇಶಿಸಿ ತಂದೆಯನ್ನು ಹಿಡಿದುಕೊಳ್ಳುವಳು.)

**ಬೇಹುಳೆ:**— ಅಪ್ಪಾ; ನೀನು ವಾಣಿಜ್ಯಯಾತ್ರೆಯಿಂದ ತಿರುಗಿ ಬಂದ ಸುದ್ದಿಯನ್ನು ಕೇಳಿದೆನು. ಅವ್ವನೂ ನಾನೂ ಅಂತಃಪುರದಲ್ಲಿದ್ದು ನಿನ್ನ ದಾರಿಯ ನೋಡಿದೆವು. ಬಹಳ ವೇಳೆಯಾದರೂ ನೀನು ಒಳಗೆ ಬರಲಿಲ್ಲ. ನಾನು ತಡೆಯ ದವಳಾಗಿ ಬಂದುಬಿಟ್ಟೆನು. ಅಪ್ಪಾ, ಒಂದು ವರುಷದ ವರೆಗೆ ಪ್ರವಾಸಮಾಡಿ

ಬಂದವನು ನೀನು ! ವರುಷದ ದೀರ್ಘದಿನಗಳನ್ನು ನಾವು ನಿನ್ನ ವಿರಹದಲ್ಲಿ ಕಳೆದವರು ! ಯಾವಾಗ್ಗೆ ಬರುವನೊ, ಯಾವಾಗ್ಗೆ ಮಾತಾಡಿಸೇವೊ ಎಂದು ಉತ್ಕಂಠೆಯಲ್ಲಿದ್ದವರು ನಾವು ! ಹೀಗಿರಲು ವಾಣಿಜ್ಯ ಪ್ರವಾಸದಿಂದ ತಿರುಗಿ ಮನೆಗೆ ಬಂದ ನೀನು ಅಂತಃಪುರವನ್ನು ಸೇರಬಯಿಸದೆ, ಹೊರಗೇ ಮಾತಾಡುತ್ತ ಕಾಲಹರಣ ಮಾಡಬೇಕೆ ? ನನಗಂತೂ ನಿನ್ನ ಈ ವ್ಯವಹಾರವು ಎಷ್ಟುಮಾತ್ರಕ್ಕೂ ಮನಸ್ಸಿಗೆ ಬರಲೊಲ್ಲದು !

**ಸಾಯ:**—ಮಗು, ನಿನ್ನಿನ ಇಂದ್ರಪೂಜೆಯ ಉತ್ಸವದಲ್ಲಿ ನೀನು ನೃತ್ಯಾರತಿಯನ್ನು ಮಾಡಲಿಕ್ಕೇಕೆ ಸಮ್ಮತಿಸಲಿಲ್ಲ ?

**ಬೇಹುಳೆ:**—ಅಪ್ಪಾ, ಈಗ ಈ ಮಾತು ಬೇಡ. ಸಾವಕಾಶವಾಗಿ ಮಾತಾಡಿದರೆ ನಡೆಯುವದು.

**ಸಾಯ:**—ಮಗು, ನೀನು ನೃತ್ಯಾರತಿಯನ್ನು ಮಾಡಲಿಕ್ಕೆ ಒಪ್ಪದ್ದರಿಂದ ರಾಜ್ಯದಲ್ಲಿ ಮಹಾನರ್ಥವುಂಟಾಗಿದೆ. ನಾನು ಮೊದಲು ಇಂದ್ರಪೂಜೆಯ ಸಾಗುವಂತೆ ಮಾಡಿ, ಅನರ್ಥವನ್ನು ತಡೆಯಬೇಕಾಗಿದೆ. ತಡಮಾಡಿದರೆ ನಡೆಯುವಂತಿಲ್ಲ. ನಿನ್ನೆ ಗುರುಗಳು ಆಜ್ಞೆಮಾಡಿದರೂ, ನೀನು ನರ್ತನಮಾಡದಿರುವವಕ್ಕೆ ಕಾರಣವೇನು ?

**ಬೇಹುಳೆ:**—( ಪುರೋಹಿತನ ಕಡೆಗೆ ನೋಡಿ ) ಈಗಾಗಲೆ ಗುರುಗಳು ನಿನ್ನನ್ನು ಹಿಡಿದಿರುವರೆ ? ಒಳ್ಳೆ, ಅವಸರದವರಿವರು ! ಆಗಲಿ, ನಾನು ಕುಣಿಯುವದಿಲ್ಲ ! ಆರತಿಮಾಡುವದಿಲ್ಲ ! ನಸ್ನಿಚ್ಛೆ ! ನೀವೇನು ಮಾಡುವಿರಿ ?

**ಸಾಯ:**— ಮಗು, ಹೀಗೆ ಅನ್ನಲಾಗದು ! ಗುರುಹಿರಿಯರ ಆಜ್ಞೆಯನ್ನು ಮೀರಲಾಗದು ! ಸಣ್ಣ ಹುಡುಗೆಯಾದ ನೀನು ಯಾವಾಗಲೂ ಗುರುಹಿರಿಯರಿಗೆ ವಿಧೇಯಳಾಗಿರಬೇಕು !

**ಬೇಹುಳೆ:**—ಅಪ್ಪಾ, ನೀನು ಹೇಳುವೆಯೆಂದ ಬಳಿಕ ನಾನು ನೃತ್ಯಾರತಿಯನ್ನು ಮಾಡುವೆನು.

**ಸಾಯ:**—ಗುರುಗಳೆ, ನೀವು ಇಂದೇ ಬೇಗನೆ ಪೂಜೆಯ ಸೌರಣೆಯನ್ನು ಮಾಡಿರಿ.

**ಬೇಹುಳೆ:**— ಅಪ್ಪಾ, ನಾನು ನೃತ್ಯಾರತಿಯನ್ನು ಮಾಡಬೇಕಾದರೆ, ನೀನು ಇಂದೇ ಬೇಗನೇ ನನಗೊಂದು ನವಿಲು ತಂದುಕೊಡಬೇಕು.

**ಸಾಯ:**—ಮಗು, ನವಿಲೇತಕ್ಕೆ ಬೇಕು ?

**ಬೇಹುಳೆ:**—ಅಪ್ಪಾ ನವಿಲು ! ಒಂದು ನವಿಲಾದರೂ ನನಗೆ ಬೇಕೇ ಬೇಕು ! ನಾನಿದುವರಗೆ ಮಯೂರವನ್ನು ಪ್ರತ್ಯಕ್ಷ ಕಂಡಿದ್ದಿಲ್ಲ—ಕೇವಲ ಚಿತ್ರದಲ್ಲಿ ನೋಡಿದ್ದೆನು. ಆದರೆ ಮೊನ್ನಿನ ರಾತ್ರಿಯಲ್ಲಿ ಕನಸಿನಲ್ಲಿ ನವಿಲ ನೋಡಿದೆನು. ಎಂತಹ ಸುಂದರಪ್ರಾಣಿಯದು ! ಆಕಾಶದಲ್ಲಿಯ ಮೇಘವನ್ನು ನೋಡುತ್ತ ಕುಣಿಯುತಲಿತ್ತು. ಎಷ್ಟು ಸೊಗಸಿನ ಕುಣಿತವದು ! ನಾನು ನೋಡಿ ಮೋಹಿತಳಾಗಿ ಹಿಡಿಯಹೋದೆನು. ಅಲ್ಪಾವಕಾಶದಲ್ಲಿಯೆ ಹಿಡಿದು ಬಿಡುತ್ತಿದ್ದೆನು. ಆದರೆ ಅಷ್ಟರಲ್ಲಿಯೆ ಎಚ್ಚತ್ತುಹೋದೆನು. ( ಸಣ್ಣಮೋರೆಯಿಂದ ) ಆ ನವಿಲು ನನ್ನ ಕೈಗೆಸಿಗಲಿಲ್ಲ ! ನನಗೆ ನವಿಲಿನ ಹುಚ್ಚು ಹಿಡಿದಂತಾಗಿದೆ !

**ಸಾಯ:**—ಮಗಳೆ, ಈಗ ಹುಡುಗಾಟಿಕೆಯ ಮಾತಾಡಲಿಕ್ಕೆ ಅವಕಾಶವಿಲ್ಲ. ನನ್ನ ಮಾತನ್ನು ಕೇಳು. ನರ್ತನದ ಸಿದ್ಧತೆಗೆ ತೊಡಗು.

**ಬೇಹುಳೆ:**—ಅಪ್ಪಾ, ನಾನು ನಿನ್ನ ಮಾತು ಕೇಳಬೇಕಾದರೆ, ನೀನು ನನ್ನ ಮಾತು ನಡಿಸಲಿಕ್ಕೆಬೇಕು —ಮಯೂರವನ್ನು ತಂದುಕೊಡಬೇಕು. ನಾನು ನವಿಲಿನಹಾಗೆ ಕುಣಿಯಲಿಕ್ಕೆ ಕಲಿಯುವೆನು.

**ಸಾಯ:**— ನಾನು ನನ್ನ ರಾಜ್ಯದಲ್ಲಿದ್ದ ಮಯೂರಗಳನ್ನೆಲ್ಲ ನಾಶ ಮಾಡಿಸಿರುವೆನು ! ನಿನಗೆ ಮಯೂರವು ದೊರೆಯದು ! ನೀನು ಹಟಹಿಡಿಯದಿರು. ಹೇಳಿದಂತೆ ನೃತ್ಯಾರತಿಯ ತಯಾರಿಗೆ ತೊಡಗು ಹೋಗು.

**ಬೇಹುಳೆ:**—ಅಪ್ಪಾ, ನಾನು ಮಯೂರವನ್ನು ಕಾಣದೆ ಬದುಕಿರಲಾರೆನು ! ನನಗೆ ಮಯೂರವು ಬೇಕೆಬೇಕು ! ( ಅಳಹತ್ತುವಳು. )

**ಸಾಯ:**—ಮಗು, ಹೀಗೆ ಹುಚ್ಚಿಯಂತಾಚರಿಸಬೇಡ. ಸುಮ್ಮನಾಗು. ನಾನು ನಿನಗೋಸುಗ ಮುತ್ತಿನ ಸರವನ್ನು ತಂದಿದ್ದೇನೆ. ಹೀರಕಖಚಿತವಾಗಿದ್ದ ಉಂಗುರವನ್ನು ತಂದಿದ್ದೇನೆ.

**ಬೇಹುಳೆ:**—ಅಪ್ಪಾ, ನೀನು ವ್ಯಾಪಾರಕ್ಕೆ ಹೊರಟಾಗ ಹಸ್ತಿದಂತದ ಕುಂಕುಮಕರಡಿಗೆಯನ್ನು ತಕ್ಕೊಂಡು ಬಾ ಎಂದು ಹೇಳಿದ್ದನಲ್ಲವೆ ? ತಂದಿರುವೆಯಾ !

**ಸಾಯು:**—( ಕ್ಷಣಕಾಲ ಸುಮ್ಮನಿದ್ದು ) ಮಗು, ಕುಂಕುಮ ಕರಡಿಗೆಯನ್ನು ತರಲಿಕ್ಕೆ ನೆನಪಾಗಲಿಲ್ಲ. ಮರೆತುಹೋಯಿತು. ನಾನು ನಿನಗೋಸುಗ ರತ್ನಖಚಿತ ಸುವರ್ಣವಲಯಗಳನ್ನು ಮಾಡಿಸಿ ತಕ್ಕೊಂಡು ಬಂದಿದ್ದೇನೆ. ತಲೆಯಲ್ಲಿ ಹಾಕಿಕೊಳ್ಳುವ ಹಲವು ಬಗೆಯ ಹೂಗಳನ್ನು ತಂದಿದ್ದೇನೆ. ಇನ್ನೂ ಹಲವು ಉತ್ತಮೋತ್ತಮ ವಸ್ತುಗಳನ್ನು ತಂದಿದ್ದೇನೆ. ನೀನು ನನ್ನ ಅಪ್ಪಣೆಯ ಮೇರೆಗೆ ಇಂದು ನೃತ್ಯಾರತಿಯನ್ನು ಮಾಡಿದರೆ, ನಾನು ಎಲ್ಲ ವಡವೆಗಳನ್ನು ನಿನಗೆ ಕೊಡುವೆನು.

**ಬೇಹುಳೆ:**—ಅಪ್ಪಾ, ನೀನು ಕೊಡತಕ್ಕ ವಸ್ತುಗಳಲ್ಲಿ ಮಯೂರವಿಲ್ಲ ! ಹಸ್ತಿದಂತದ ಕುಂಕುಮ ಕರಡಿಗೆಯಿಲ್ಲ ! ಇವೆರಡು ನನಗೆ ಅವಶ್ಯವಾಗಿ ಬೇಕಾಗಿದ್ದವು ! ಉಳಿದವು ನನಗೆ ಬೇಕಿಲ್ಲ ! ( ಸಣ್ಣಮೋರೆಮಾಡಿಕೊಂಡು ಹೋಗಲುದ್ಯುಕ್ತಳಾಗುವಳು. )

**ಸಾಯು:**—ಮಗು, ಹೋಗಬೇಡ ಸಲ್ಪ ನಿಲ್ಲು.

**ಬೇಹುಳೆ:**—ನಾನೇಕೆ ನಿಲ್ಲಬೇಕು ? ನನಗೆ ನವಿಲನ್ನು ಕೊಡುವದಿಲ್ಲ ! ಆನೆಯ ಕೋರೆಯ ಕುಂಕುಮ ಕರಡಿಗೆಯನ್ನು ಕೊಡುವದಿಲ್ಲ !

( ಲಕ್ಷ್ಮೀಂದರನು ಪ್ರವೇಶಿಸುವನು. )

**ಲಕ್ಷ್ಮೀಂದರ:**—ಬಾಲೆ. ನಿನಗೆ ಹಸ್ತಿದಂತದ ಕರಡಿಗೆಯು ಬೇಕೆ? ನನ್ನಲ್ಲಿದೆ. ಇಂದೇ ನಾನಿದನ್ನು ಒಬ್ಬ ವ್ಯಾಪಾರಿಯ ಬಳಿಯಲ್ಲಿ ಕೊಂಡಿರುವೆನು. ಆದರೆ ನಾನಿದನ್ನು ನಿನಗೆ ಕೊಡಲಾರೆನು. ನವಿಲನ್ನು ಮಾತ್ರ ಕೊಡಬಲ್ಲವನಾಗಿದ್ದೇನೆ. ಆದರೆ—(ಸುತ್ತಲೂ ನೋಡುವನು)

**ಸಾಯು:**—ತರುಣನೆ, ನೀನಾರು ?

**ಬೇಹುಳಿ:**—( ಲಕ್ಷ್ಮೀಂದರನ ಕಡೆಗೆ ನಡೆದು) ಹಸ್ತಿದಂತದ ಕುಂಕುಮ ಕರಡಿಗೆಯು ನಿಮ್ಮಲ್ಲಿದೆಯೆ ? ಇಲ್ಲ ? ತೋರಿಸಿರಿ. ನವಿಲೂ ಇರುವದೆ ? ಎಲ್ಲಿರುವದು ?

**ಸಾಯ:**—(ಕರ್ಕಶ ಸ್ವರದಿಂದ) ಬೇಹುಳಿ, ಇನ್ನು ಇಲ್ಲಿ ನಿಲ್ಲಬೇಡ ! ಕೂಡಲೆ ಹೊರಟುಹೋಗು ! (ಬೇಹುಳಿಯು ಲಕ್ಷ್ಮೀಂದರನ ಕಡೆಗೆ ನೋಡುತ್ತ ಹೊರಟುಹೋಗುವಳು ) ಯುವಕನೆ, ನೀನಾರು ? ಇಲ್ಲಿಗೆ ಏಕೆಬಂದಿರುವೆ ? ದ್ವಾರಪಾಲಕರು ನಿನ್ನನ್ನು ಒಳಗೆ ಬಿಟ್ಟದ್ದು ಹೇಗೆ ?

**ಲಕ್ಷ್ಮೀಂದರ:**—ನೀವು ಇಂದೇ ವಾಣಿಜ್ಯಯಾತ್ರೆಯಿಂದ ತಿರುಗಿ ಬಂದಿರುವಿರೆಂಬ ಸುದ್ದಿಯನ್ನು ಕೇಳಿದೆನು. ನನ್ನ ತಂದೆಯುವರೂ ವಾಣಿಜ್ಯಯಾತ್ರೆಗೆ ಹೋಗಿದ್ದಾರೆ. ಬಹುದಿನಗಳಾದರೂ ಅವರು ತಿರುಗಿ ಮನೆಗೆ ಬಂದಿಲ್ಲ. ಅವರ ಸುದ್ದಿಯೂ ನಮಗಿಲ್ಲದಾಗಿದೆ. ನಿಮಗೇನಾದರೂ ನನ್ನ ತಂದೆಯುವರ ಸಮಾಚಾರವು ಗೊತ್ತಿರಬಹುದೆಂದು ಭಾವಿಸಿ ನಿಮ್ಮಿಂದ ಸಮಾಚಾರವನ್ನರಿತುಕೊಳ್ಳಲಿಕ್ಕೆಂದು ನಾನಿಲ್ಲಿಗೆ ಬಂದಿದ್ದೇನೆ.

**ಸಾಯ:**—ನಿನ್ನ ತಂದೆ ಯಾರು ? ಅವರ ಹೆಸರೇನು ?

**ಲಕ್ಷ್ಮೀಂದರ:**—ನಾನು ಹುಟ್ಟುವದಕ್ಕೆ ಒಂದು ತಿಂಗಳಿರುವಾಗಲೆ, ತಂದೆಯುವರು ಮಧುಕರ ಹಡಗವನ್ನೇರಿ ವ್ಯಾಪಾರಕ್ಕೆಂದು ಹೋಗಿರುವರು. ಇಂದಿಗೆ ಇಪ್ಪತ್ತು ವರ್ಷಗಳಾಗಿದ್ದರೂ, ಅವರು ತಿರುಗಲಿಲ್ಲ. ಯಾವ ಸಮಾಚಾರವನ್ನೂ ತಿಳುಹಲಿಲ್ಲ. ನಾವೆಲ್ಲರೂ ತುಂಬ ಚಿಂತಾಗ್ರಸ್ತರಾಗಿದ್ದೇವೆ.

**ಸಾಯ:**—ಮಧುಕರ ಹಡಗವನ್ನೇರಿ ಹೊರಟಿರುವನೆಂದಬಳಿಕ ಅವನು ಚಾಂದಸವದಾಗರನಿರಲಿಕ್ಕೆ ಬೇಕು.

**ಲಕ್ಷ್ಮೀಂದರ:**—ಅಹುದು. ನಾನು ಚಾಂದಸವದಾಗರರ ಮಗನು. ಅವರು ಬದುಕಿರುವರಷ್ಟೆ ? ಹೇಳಿರಿ, ಬೇಗನೆ ಹೇಳಿರಿ.

**ಸಾಯ:**— ವಾಣಿಜ್ಯಯಾತ್ರೆಗೆಂದು ಹೊರಟು ಜಲಪ್ರವಾಸದಲ್ಲಿರುವ ನಾವಿಬ್ಬರೂ ಒಂದೆಡೆಯಲ್ಲಿ ಕೂಡಿದ್ದೆವು. ಬಳಿಕ ಅವನು ದಕ್ಷಿಣ ಪಾಟಣಾಪ

ಕಡೆಗೆ ಹೋದನು. ನಾನು ಮುಂದೆ ಹೋಗದೆ, ತಿರುಗಿ ಬಂದುಬಿಟ್ಟೆನು. ಯುವಕನೆ, ನೀನು ಚಾಂದಸವದಾಗರನ ಮಗನೆ ? ಒಳ್ಳೆ ಆನಂದದ ಸಂಗತಿ ! ಚಾಂದಸವದಾಗರನಿಗೆ ನಿನ್ನಂತಹ ಸುಂದರಾಕೃತಿಯ ಸುಕುಮಾರನಿರುವದು ಬಹು ಸಂತೋಷದ ಸಂಗತಿ! ಚಾಂದಸವದಾಗರನು ನನ್ನ ಪ್ರೀತಿಯ ಗೆಳೆಯನು. ನಾವಿಬ್ಬರೂ ಅಭಿನ್ನಹೃದಯ ಸ್ನೇಹಿತರು. ಚಾಂದನಿಗೆ ನಿನ್ನ ಸುದ್ದಿಯು ಗೊತ್ತಿಲ್ಲ. ಹಡೆಯಲಾದ ಹೆಂಡತಿಯನ್ನು ಬಿಟ್ಟು ವ್ಯಾಪಾರಕ್ಕೆ ಹೊರಟನೆಂದೂ, ಹೆಂಡತಿಯು ಹಡೆದ ವರ್ತಮಾನವು ತನಗೆ ತಿಳಿದಿಲ್ಲವೆಂದೂ ಅವನು ನನ್ನಮುಂದೆ ಹೇಳಿದನು.

**ಲಕ್ಷ್ಮೀಂದರ:**—ಅವರಿಗೆ ನನ್ನ ಸುದ್ದಿಯು ಹೇಗೆ ಹತ್ತಬೇಕು ? ನನ್ನ ಸಮಾಚಾರವನ್ನು ಅವರಿಗೆ ಯಾರು ಹೇಳಿರಬೇಕು ? ನಮ್ಮಸುದ್ದಿ ಅವರಿಗಿಲ್ಲ, ಅವರ ಸುದ್ದಿ ನಮಗಿಲ್ಲ ಹೀಗಾಗಿ ಹೋಗಿದೆ. ಏನೇ ಇರಲಿ, ಅವರು ಕುಶಲರಾಗಿ ದ್ದಾರಷ್ಟೆ ?

**ಸಾಯ:**—ನಿಸ್ಸಂದೇಹವಾಗಿಯೂ ಕ್ಷೇಮದಿಂದಿದ್ದಾನೆ.

**ಲಕ್ಷ್ಮೀಂದರ:**—ಇನ್ನು ನಾನು ಹೋಗಿಬರುವೆನು. ಅಪ್ಪಣೆ ಕೊಡಿರಿ. ಮನೆಯಲ್ಲಿ ಅವ್ವನು ಅಪ್ಪನ ವರ್ತಮಾನವನ್ನರಿಯದೆ, ಚಿಂತಾಕ್ರಾಂತಳಾಗಿದ್ದಾಳೆ. ಬಹುಪರಿಯಾಗಿ ಶೋಕಿಸುತ್ತಿದ್ದಾಳೆ. ನಾನು ಬೇಗನೆ ಹೋಗಿ ಅಪ್ಪನ ಕುಶಲ ವಾರ್ತೆಯನ್ನರುಹಿ, ಅವ್ವನನ್ನು ಸಮಾಧಾನಗೊಳಿಸುವೆನು.

**ಸಾಯ:**—ಯುವಕನೆ, ಹೋಗದಿರು. ತುಸು ತಡೆ. ಗುರುಗಳೆ, ಈ ತರುಣನು ಇಂದೇ ಹೀಗೆ ಅಕಸ್ಮಾತ್ತಾಗಿ ನನ್ನ ಕಣ್ಣಿಗೆ ಬಿದ್ದಾನೆಂದು ನಾನು ಸ್ವಪ್ನ ದಲ್ಲಿ ಸಹ ಭಾವಿಸಿದವನಲ್ಲ ! ಯೋಗಾಯೋಗವು ಹೇಗೆ ವಿಚಿತ್ರವಾಗಿದೆ, ನೋಡಿರಿ ! ಚಾಂದಸವದಾಗರನೂ ನಾನೂ ಬಾಲಮಿತ್ರರು. ಬಹುದಿವಸಗಳ ತರುವಾಯ ಮೊನ್ನೆ ಪ್ರವಾಸದಲ್ಲಿ ಅಕಸ್ಮಾತ್ತಾಗಿ ಕೂಡಿದ್ದೆವು. ಅವರು ಮತ್ತೆ ನನ್ನನ್ನಗಲಿ ಹೊರಡುವ ಸಮಯದಲ್ಲಿ ಹೇಳಿದ್ದೇನಂದರೆ ; ನಮ್ಮಿಬ್ಬರ ಸ್ನೇಹ ವನ್ನು ಧೃಢಪಡಿಸಿ ಬಳಿಸಿ ಬಹುಕಾಲ ಬಾಳುವಂತೆ ಮಾಡುವುದಕ್ಕೆ ನಾನೊಂದು ಯುಕ್ತಿಯನ್ನು ಸೂಚಿಸುವೆನು. ನೀನು ಹೀಗೆ ವರ್ತಿಸಿದರೆ, ನಮ್ಮಿಬ್ಬರಿಗೂ

ಹಿತವಾಗುವದು. ನಿನಗೆ ಕಿಶೋರವಯಸ್ಸಿನ ಕನ್ಯೆಯಿರುವಳಷ್ಟೆ? ಒಂದುವೇಳೆ ನನ್ನ ಹೆಂಡತಿಯು ಪುತ್ರನನ್ನು ಪ್ರಸವಿಸಿದ್ದರೆ-ಅವನು ಇದುವರೆಗೆ ಜೀವಂತನಾಗಿದ್ದರೆ-ನೀನವನಿಗೆ ನಿನ್ನ ಕನ್ಯೆಯನ್ನು ಕೊಟ್ಟು ವಿವಾಹಮಾಡು.

**ಪುರೋಹಿತ:**—ಯೋಗಾಯೋಗವು ವಿಚಿತ್ರವೆ ಸರಿ !

**ಸಾಯ:**—ಮತ್ತೆ ಅವನು ನನಗೆ ಹೇಳಿದ್ದೇನಂದರೆ, ನಾನು ಬಹುದಿನಗಳಿಂದ ಪ್ರವಾಸದಲ್ಲಿರುವೆನು. ಇನ್ನು ಬಹುಕಾಲ ಅತ್ತಿತ್ತ ಸಂಚರಿಸಬೇಕೆಂದಿರುವೆನು. ನೀನು ನಿನ್ನ ಮಗಳನ್ನು ನನ್ನ ಮಗನಿಗೆ ಕೊಟ್ಟು ಅಭಿಭಾವಕನಾದರೆ, ಪ್ರವಾಸದಲ್ಲಿರುವ ನನಗೆ ಪ್ರಾಪಂಚಿಕ ಚಿಂತೆಯು ತಪ್ಪಿಹೋಗುವದು. ನಾನು ನಿಶ್ಚಿಂತನಾಗಿ ಸಂಚರಿಸಿ ವ್ಯಾಪಾರಮಾಡುವೆನು. ನೀನು ನನ್ನ ಇದೊಂದು ಕೋರಿಕೆಯನ್ನು ಪೂರ್ಣಮಾಡಲಿಕ್ಕೆ ಬೇಕು. ಚಾಂದನು ಹೀಗೆ ಮಾತಾಡಿ ಸಣ್ಣಮೋರೆ ಮಾಡಿ ನಿಂತನು. ಅವನ ಮನೋವ್ಯಥೆಯನ್ನು ತಿಳಿದು ನನಗೆ ಸಹಿಸುವದಕ್ಕಾಗಲಿಲ್ಲ. ನೀನು ಹೇಳಿದಂತೆ ನಾನು ತಪ್ಪದೆ ಮಾಡುವೆನೆಂದು ವಚನಕೊಟ್ಟುಬಿಟ್ಟೆನು.

**ಪುರೋಹಿತ:**—ಈ ತರುಣನು ಸುಲಕ್ಷಣಯುಕ್ತನು. ಸುಂದರಾಕಾರನು. ಮುಖ್ಯವಾಗಿ ಚಾಂದಸವದಾಗರನು ಕುಲ-ಶೀಲಾದಿ ಸಕಲದೃಷ್ಟಿಯಿಂದಲೂ ಗೌರವಾನ್ವಿತನು. ಚಾಂದಸವದಾಗರನೊಡನೆ ಶರೀರಸಬಂಧ ಬಳಸುವದು ಅಭಿಮಾನಾಸ್ಪದ ಸಂಗತಿಯೆ ಸರಿ. ಆದರೆ ಅವನು ಮನಸಾದೇವಿಯ ವಿರೋಧಿಯು. ಅವನು ಮನಸಾದೇವಿಯೊಡನೆ ಪ್ರಬಲ ವಿರೋಧ ಬಳಸಿದ್ದರಿಂದಲೆ, ಅವನ ಆರುಮಂದಿ ಮಕ್ಕಳು ಅಕಾಲದಲ್ಲಿ ಸರ್ಪದಂಶನದಿಂದ ದುರ್ಮರಣಕ್ಕೀಡಾದರು !

**ಸಾಯ:**—ಇದೊಂದು ವಿಚಾರಣೀಯ ಸಂಗತಿಯು ! ಆದರೆ ಆಗ ನಾನು ಯಾವುದನ್ನು ವಿಚಾರಿಸಲಿಲ್ಲ. ಚಾಂದಸವದಾಗರನ ಕೈಮೇಲೆ ಕೈಹಾಕಿ ವಚನಕೊಟ್ಟುಬಿಟ್ಟೆನು ! ಈಗೇನುಮಾಡಲಿ ?

( ಅಮಲೆಯು ಬರುವಳು. )

**ಅಮಲೆ:**—ಪ್ರಾಣನಾಥ, ನಾನು ಮರೆಯಲ್ಲಿದ್ದು ಎಲ್ಲವನ್ನೂ ಕೇಳಿರುವೆನು. ಸರಿಯಾದ ಮಾರ್ಗವನ್ನು ಸೂಚಿಸುವದಕ್ಕೆ ಬಂದಿರುವೆನು. ಏನೇ

ಆಗಲಿ, ಕೊಟ್ಟ ವಚನವನ್ನು ನಡಿಸಿರಿ ! ಸತ್ಯ ಮಾರ್ಗದಲ್ಲಿ ಸಂಚರಿಸಿದರೆ, ದಶ ರಥ ಮಹಾರಾಜನಂತೆ ಕೀರ್ತಿಶಾಲಿಗಳಾಗುವಿರಿ ! ಸತ್ಯಭಂಗಮಾಡಿದರೆ, ಯುಗಾನು ಯುಗಗಳಲ್ಲಿ ಅಪಕೀರ್ತಿಯನ್ನು ಕಟ್ಟಿಕೊಳ್ಳುವಿರಿ ! ಜನರ ಅವಹೇಲನೆಗೆ ಗುರಿ ಯಾಗುವಿರಿ ! ಭೀರುವು ವಚನಭಂಗಮಾಡುವನು ! ಕಾಪುರುಷನು ವಚನಭಂಗ ಮಾಡುವನು ! ಯಾಕಂದರೆ, ಕೊಟ್ಟ ವಚನವನ್ನು ಪಾಲಿಸುವ ಶಕ್ತಿಯೂ ಸಾಹಸವು ಅವನಿಗಿರುವದಿಲ್ಲ ! ಆದರೆ ನಿಮ್ಮಂತಹ ......

**ಸಾಯು**:—( ಲಕ್ಷ್ಮೀಂದರನ ಹತ್ತಿರಹೋಗಿ ಮಮತೆಯಿಂದ ಅವನ ಎರಡೂ ಕೈಗಳನ್ನು ಹಿಡಿದು ) ವತ್ಸ, ನಾನಿಂದು ನನ್ನಮಗಳಾದ ಬೇಹುಳೆಯನ್ನು ನಿನಗೆ ಧಾರೆಯೆರೆದು ಕೊಡುವೆನೆಂದು ವಾಗ್ದಾನ ಮಾಡಿರುವೆನು.

**ಪುರೋಹಿತ**:—ವಣಿಗ್ರಾಜನೆ, ಅವಸರಮಾಡಬೇಡ. ವಾಗ್ದಾನದ ಕಾರ್ಯವು ಈಗ ಬೇಡ. ನೀನೀಗ ಇಂದ್ರಪೂಜೆಯ ವಾರ್ಷಿಕೋತ್ಸವವನ್ನು ನೆರೆ ವೇರಿಸಬೇಕಾಗಿದೆ. ಬಳಿಕ ಮನಸಾದೇವಿಯನ್ನು ಅರ್ಚಿಸಿ ಅವಳ ಪ್ರಸನ್ನತೆಯನ್ನು ಪಡೆಯಬೇಕಾಗಿದೆ. ಮನಸಾದೇವಿಯ ಪೂಜೆಗೆ ತೊಡಗುವ ಮೊದಲು ಸರ್ಪ ಹತ್ಯಾಕಾರಿಯನ್ನು ಹಿಡತರಿಸಿ ಭಯಂಕರವಾದ ಶಿಕ್ಷೆಗೆ ಗುರಿಮಾಡಬೇಕಾಗಿದೆ. ಇಷ್ಟೆಲ್ಲ ಕೆಲಸಗಳನ್ನು ಸಿಲುಕು ಇಟ್ಟುಕೊಂಡು ರಭಸದಿಂದ ವಾಗ್ದಾನಕ್ಕೆ ದುಮ್ಮಿ ಕ್ಕುವದು ಹಿತಕರವಲ್ಲ !

( ನಗರರಕ್ಷಕನೂ ಸೇವಕನೂ ಪ್ರವೇಶಿಸುವರು. )

**ಸಾಯು ಸವದಾಗರ**:— ಅಪರಾಧ ಎಲ್ಲಿ ?

**ಸೇವಕ**:— ಇದೇನು ? ಅವನು ಇಲ್ಲಿರುವನು !

**ಸಾಯು**:— ಸರ್ಪಹತ್ಯಾಕಾರಿಯೆಲ್ಲಿ ?

**ಸೇವಕ**:— ಮಹಾಪ್ರಭುವೆ, ಅಪರಾಧಿಯು ನಿಮ್ಮ ಎದುರಿನಲ್ಲಿಯೆ ಇದ್ದಾನೆ !

**ಪುರೋಹಿತ**:— ಇದೇನು, ಹೀಗೆ ಹೇಳುತ್ತಿರುವೆ !

**ಸೇವಕ**:— ( ಲಕ್ಷ್ಮೀಂದರನನ್ನು ತೋರಿ ) ಇವನೇ ಸರ್ಪವನ್ನು ಕೊಂದವನು !

( ಸೇವಕನು ನಗರರಕ್ಷನ ಇಂಗಿತವಂತೆ ಲಕ್ಷ್ಮೀಂದರನನ್ನು ಬಂಧಿಸಹೋಗುವನು )

**ಪುರೋಹಿತ ಹಾಗು ಅಮಲೆ:—** ಎಲೊ, ನೀನಿದೇನು ಮಾಡುತ್ತಿರುವೆ ?

**ಸಾಯ ಸವದಾಗರ:—** ಬಂಧಿಸಬೇಡ. ಸುಮ್ಮನಿರು. ( ಸೇವಕನು ಹಿಂದೆ ಸರಿಯುವನು. ) ತರುಣನೆ, ನೀನು ಹಾವನ್ನು ಕೊಂದಿರುವೆಯಾ ?

**ಲಕ್ಷ್ಮೀಂದರ:—** ನಾನು ಹಾವು ಕೊಂದವನಲ್ಲ! ( ಸಾಯಸವದಾಗರನು ಸೇವಕನ ಕಡೆಗೆ ನೋಡುವನು )

**ಸೇವಕ:—** ಎಲೊ, ನೀನು ಹಾವನ್ನು ಕೊಲ್ಲಲಿಲ್ಲವೆ ? ಸುಳ್ಳಾಡುವೆಯಾ ? ನೀನು ಹಾವ ಕೊಂದಿರುವವದನ್ನು ನಾನು ಪ್ರತ್ಯಕ್ಷವಾಗಿ ಕಂಡಿದ್ದೇನೆ.

**ಲಕ್ಷ್ಮೀಂದರ:—** ನೀನು ಸೇವಕನು ಮಾತ್ರ! ಬಾಯಿಗೆಬಂದಂತೆ ಬೊಗಳಬೇಡ !

**ಸೇವಕ:—** ಮಹಾಪ್ರಭುವೆ, ಇವನೇ ಅಪರಾಧಿಯು! ಆದರೆ ಈಗ...

**ಲಕ್ಷ್ಮೀಂದರ:—** ( ಸೇವಕನ ಕುತ್ತಿಗೆಯನ್ನು ಹಿಡಿದು ಮತ್ತೆ ಬಿಟ್ಟುಕೊಡುವನು ) ಈ ಸೇವಕನ ಮೇಲೆ ಹರಿಹಾಯ್ದು ಉಪಯೋಗವಿಲ್ಲ ಶ್ರೀಮಂತನ ಮನೆಯ ನಾಯಿಯಂತಿದ್ದಾನೆ. ಬಾಯಿಗೆಬಂದಂತೆ ಬೊಗಳುತ್ತಿದ್ದಾನೆ. ನಾನಿವನನ್ನು ಲೆಕ್ಕಿಸಕೂಡದು. ವಣಿಗ್ರಾಜನೆ, ಕೇಳು ಹಾವನ್ನು ನಾನು ಕೊಂದವನಲ್ಲವಿಷ್ಟೆ ಅಲ್ಲ; ಆಜನ್ಮ ಪ್ರಾಣಹಿಂಸೆಮಾಡಿದವನಲ್ಲ ! ಪರಪೀಡೆಯಂಥ ಪಾಪವಿಲ್ಲವೆಂಬದನ್ನರಿತಿದ್ದ ನಾನು ಯಾವಾಗಲೂ ಅಹಿಂಸೆಯ ವ್ರತವನ್ನಾಚರಿಸುತ್ತಿದ್ದೇನೆ.

**ಪುರೋಹಿತ:—** ಹೀಗಿದ್ದರೆ, ಸರ್ಪಹತ್ಯಾಕಾರಿಗಳಾರು ?

**ಲಕ್ಷ್ಮೀಂದರ:—** ನನ್ನ ನವಿಲು.

**ಪುರೋ. ಹಾಗು ಸಾಯ:—** (ಒಮ್ಮೆಲೆ ವಿಸ್ಮಯದಿಂದ) ನವಿಲೆ ?

**ಲಕ್ಷ್ಮೀಂದರ:—** ಅಹುದು. ನನ್ನ ಅಂಗರಕ್ಷಕ ಮಯೂರ! ( ಪುರೋಹಿತನೂ ಸಾಯಸವದಾಗಸನೂ ಲಕ್ಷ್ಮೀಂದರನ ಮುಖವನ್ನು ನೋಡಹತ್ತುವರು. ) ಅಮ್ಮನು ಸರ್ಪದಂಶನ ಭಯದಿಂದ ಮಯೂರವನ್ನು ಸಾಕಿದ್ದಾಳೆ.

ಹಾಗು ನಾನೆಲ್ಲಿಗಾದರೂ ಹೊರಟರೆ, ನನ್ನ ಸಂಗಡ ನವಿಲನ್ನೂ ಕಳುಹುತ್ತಾಳೆ. ನಾನು ಈ ನಗರಕ್ಕೆ ಬಂದಾಗ್ಗೆ ಅಂಗರಕ್ಷ ನವಿಲು ನನ್ನ ಸಂಗಡ ಬಂದಿತ್ತು. ರಾಜಮಾರ್ಗದಲ್ಲಿ ಹಾವು ಭುಸಗುಟ್ಟುತ್ತ ಬಂದು ನನ್ನನ್ನು ಕಚ್ಚುವಸರಲ್ಲಿತ್ತು. ನನ್ನ ನವಿಲು ಧಾವಿಸಿ ಬಂದು ಆ ಹಾವನ್ನು ಕೊಂದುಹಾಕಿತು. ಸರ್ಪದ ಜೀವವನ್ನು ಉಳಿಸಿಕೊಳ್ಳುವ ಅವಕಾಶವು ನನಗಿರಲಿಲ್ಲ. ಕಾರಣ ನಾನು ನಿರುಪಾಯನಾಗಿ ಸರ್ಪಹತ್ಯೆಯನ್ನು ನೋಡಬೇಕಾಯಿತು.

**ಸಾಯುಸವದಾಗರ:—** ಒಂದಕ್ಕಿಂತಲೂ ಮತ್ತೊಂದು ವಿಚಿತ್ರ ಸಂಗತಿ ! ನಾನಿವುಗಳನ್ನು ಕೇಳಲಾರೆನು ! ತಕ್ಕ ವ್ಯವಸ್ಥೆಯನ್ನು ಮಾಡಲಾರೆನು ! ಪ್ರಿಯೆ, ಏಕೊ ನನ್ನ ತಲೆ ನೋಯುಹತ್ತಿದೆ ! ನಾನಿನ್ನು ಇಲ್ಲಿರಲಾರೆನು ! ನನ್ನನ್ನು ಕರೆದೊಯ್ದು ಹಾಸುಗೆಯ ಮೇಲೆ ಮಲಗಿಸು. ( ಅಮಲೆಯು ಸಾಯುಸವದಾಗರನ ಹತ್ತಿರ ಬರುವಳು )

**ನಗರರಕ್ಷಕ:—** ಮಹಾಪ್ರಭುವೆ, ಈ ತರುಣನ ವಿಷಯವಾಗಿ ತಮ್ಮ ಅಪ್ಪಣೆಯೇನು ?

**ಸಾಯುಸವದಾಗರ:—** ಪ್ರಿಯೆ, ತಲೆತಿರುಗಹತ್ತಿದೆ. ಮಾತಾಡಲಾರದವನಾಗಿದ್ದೇನೆ. ನಾನಿಂದು ಮನೆಗೆ ಬಂದ ಮೂಹೂರ್ತವೇ ಒಳಿತಿಲ್ಲ. ಇನ್ನು ಕ್ಷಣಕಾಲವಾದರೆ, ನಾನು ಬಿದ್ದುಬಿಡುವೆನು ! ಬೇಗನೆ ಒಳಗೆ ಕರೆದೊಯ್ಯು ! ( ಅಮಲೆಯು ಸಾಯುಸವದಾಗರನನ್ನು ಕರೆದುಕೊಂಡು ಹೋಗುವಳು. )

**ಪುರೋಹಿತ:—** ಈ ರಾಜ್ಯದಲ್ಲಿ ಸರ್ಪಹತ್ಯಾಕಾರಿಗಳಿಗೆ ಪ್ರಾಣದಂಡದ ಶಿಕ್ಷೆಯು ನಿರ್ಧಾರಿತವಾಗಿದೆ. ರಾಜನು ಈ ತರುಣನಿಗೆ ಮರಣದಂಡನೆಯ ಶಿಕ್ಷೆಯನ್ನು ಈ ಮೊದಲೇ ವಿಧಿಸಿದ್ದಾನೆ. ಇವನನ್ನು ಬಂಧಿಸಿ ತಕ್ಕೊಂಡುಹೋಗಿರಿ. ದೇಹಾಂತ ಶಿಕ್ಷೆಯನ್ನು ವಿಧಿಸಿರಿ. ಮನಸಾದೇವಿಯ ಪೂಜೆಗೋಸುಗ ನಾನಿನ್ನು ಹೋಗುವೆನು. ( ಹೋಗುವನು. ಸೇವಕನು ಲಕ್ಷ್ಮೀಂದರನನ್ನು ಬಂಧಿಸುವ ಉದ್ಯೋಗಕ್ಕೆ ತೊಡಗುವನು. ಸಾಯುಸವದಾಗರನು ಮತ್ತೆ ಬಂದು ಲಕ್ಷ್ಮೀಂದರನ ಮುಂದೆ ನಿಲ್ಲುವನು. )

**ಸಾಯು:—** ವತ್ಸ, ಚಾಂದಸವದಾಗರನ ಮಗನು ನೀನು ! ನನ್ನ ಬಾಲಸ್ನೇಹಿತನ ಏಕಮಾತ್ರ ಪುತ್ರನು ನೀನು ! ನನ್ನಾಮಿತ್ರನು ಆರು ಮಕ್ಕಳನ್ನು

ಸರ್ಪದಂಶನಕ್ಕೆ ಆಹುತಿಗೊಟ್ಟು, ಪುತ್ರಶೋಕದಿಂದ ತತ್ತರಿಸಿ, ಶೋಕಾತಿರೇಕದಿಂದ ಮೆಯ್ಮರೆದು, ಬಳಿಕ ನಿನ್ನನ್ನು ಪಡೆದಿದ್ದಾನೆ. ನೀನು ನನ್ನ ಆ ದುಃಖಿತ ಮಿತ್ರನ ಒಬ್ಬನೇ ಒಬ್ಬ ಕುಲದೀಪಕನು. ನಿನ್ನನ್ನು ನಾನು ಕೊಲ್ಲಿಸಲಾರೆನು! ಮರಣದಂಡನೆಯು ಶಿಕ್ಷೆಗೆ ಗುರಿಮಾಡಲಾರೆನು. ನೀನಿನ್ನು ಇಲ್ಲಿ ನಿಲ್ಲಬೇಡ. ಬೇಗನೆ ಹೊರಡು. ನಿನ್ನ ರಾಜ್ಯಕ್ಕೆ ಹೋಗು. ಪತಿವಿರಹದಿಂದ ದುಃಖಿತಳಾಗಿದ್ದ ನಿನ್ನ ತಾಯಿಯನ್ನು ಸಂತಯಿಸು. ( ಹೋಗುವನು. ನಗರರಕ್ಷಕನೂ ಸೇವಕರೂ ಹೋಗುವರು. ಲಕ್ಷ್ಮೀಂದರನು ಹೊರಗೆ ಬಂದು ಉದ್ಯಾನವನ್ನು ಪ್ರವೇಶಿಸುವನು. ನವಿಲಿನೊಡನೆ ಆಟವಾಡುತ್ತಿದ್ದ ಬೇಹುಳೆಯನ್ನು ನೋಡುವನು. ವಿಸ್ಮಿತನಾಗುವನು. )

**ಲಕ್ಷ್ಮೀಂದರ:—** ಇವಳು ಈಗಾಗಳೆ ನನ್ನ ನವಿಲಿನೊಡನೆ ಗೆಳೆತನ ಬೆಳೆಸಿರುವಳಲ್ಲ! ಅಪ್ರತಿಮ ರೂಪಮಂಡಿತೆಯಾದ ಈ ಬಾಲೆಯು ಸಾಯುಸವದಾಗರನ ವಾಗ್ದಾನದಂತೆ ನನ್ನ ಧರ್ಮಪತ್ನಿಯಾದರೆ, ಸೌಭಾಗ್ಯಕ್ಕೆ ಎಣೆಯಿಲ್ಲದಾಗಿ ಹೋಗುವದು! ಈಶ್ವರೀಯ ಸಂಕೇತವು ಹೇಗಿದೆಯೊ ಏನೊ! ಅದನ್ನು ಮೊದಲೆ ಕಂಡವರಾರು ?

**ಬೇಹುಳೆ:—** ( ಲಕ್ಷ್ಮೀಂದರನ ಹತ್ತಿರ ಬಂದು, ನವಿಲನ್ನು ತೋರಿ ಮೃದುಸ್ವರದಿಂದ ) ಅದು……

**ಲಕ್ಷ್ಮೀಂದರ:—** ಅದು ನನ್ನ ನವಿಲು.

**ಬೇಹುಳೆ:—** ( ಲಕ್ಷ್ಮೀಂದರನ ಮುಖವನ್ನು ನೋಡುತ್ತ ಬೇಡಿಕೆಯ ಸ್ವರದಿಂದ ) ಅದು ನಿಮ್ಮದೇ ಏಕಾಗಬೇಕು ? ನನ್ನದೇಕಾಗಬಾರದು ? ಅದು ನನ್ನ ನವಿಲು !

**ಲಕ್ಷ್ಮೀಂದರ:—** ಮುಗ್ಧೆ, ನಿನ್ನ ಸಂತುಷ್ಟತೆಗಾಗಿ ನಾನದನ್ನು ನಿನಗೆ ಕೊಡಬಲ್ಲೆನು. ಬೇಕಾದರೆ ನೀನದನ್ನು ನಿನ್ನ ಹತ್ತಿರ ಇರಿಸಿಕೊಳ್ಳಬಹುದು. ನಾನು ಬೇಡೆನ್ನುವದಿಲ್ಲ.

**ಬೇಹುಳೆ:—** ಆ ನವಿಲನ್ನು ನನಗೆ ಕೊಟ್ಟುಬಿಟ್ಟಿರಾ ? ಒಳ್ಳೆ ಆನಂದದ ಸಂಗತಿ ! ಈ ಆನಂದದ ಭರದಲ್ಲಿ ನಾನು ಹಾಡುವೆನು. ಕುಣಿಯುವೆನು. (ನೃತ್ಯ

ಗೀತಗಳನ್ನಾರಂಭಿಸುವಳು. ಲಕ್ಷ್ಮೀಂದರನು ಮೈಮರೆದು ನೃತ್ಯಗೀತಗಳನ್ನವ ಲೋಕಿಸುವನು. ಬಳಿಕ ಬೇಹುಳೆಯು ಲಕ್ಷ್ಮೀಂದರನ ತೀರ ಸನಿಯಕ್ಕೆ ಬಂದು) ಗಾಯನವನ್ನು ಕೇಳಿದಿರಾ ? ನರ್ತನವನ್ನು ನೋಡಿದಿರಾ ? ಹೇಗಾಯಿತು ! ನಿಮ್ಮ ಮನಸ್ಸಿಗೆ ಬಂತೆ ?

**ಲಕ್ಷ್ಮೀಂದರ:**— ಚಪಲೆ, ನಿನ್ನ ಗಾಯನವೂ ನರ್ತನವೂ ಬಹು ಸ್ವಾರಸ್ಯವುಳ್ಳವುಗಳಾಗಿವೆ. ನಾನಂತೂ ನೋಡಿ ಮುಗ್ಧನಾಗಿಹೋಗಿದ್ದೇನೆ! ನಿನ್ನ ಈ ನೃತ್ಯವೂ ಗೀತವೂ ಈ ಲೋಕದ್ದಲ್ಲ— ಸ್ವರ್ಗೀಯವು ! ಮಾನವನಾದ ನನಗೆ ವರ್ಣನಾತೀತವು ! ನಾನಿಂತಹ ಗಾಯನವನ್ನು ಇದು ವರೆಗೆ ಕೇಳಿದವ ನಲ್ಲ; ನರ್ತನವನ್ನು ಇದು ವರೆಗೆ ನೋಡಿದವನಲ್ಲ !

**ಬೇಹುಳೆ:**— ನನ್ನ ಗಾಯನವೂ ನರ್ತನವೂ ನಿಮ್ಮ ಮನಸ್ಸಿಗೆ ಬಂದಿತಷ್ಟೆ ? ನೀವು ಸಂತುಷ್ಟರಾಗಿರುವಿರಷ್ಟೆ ?

**ಲಕ್ಷ್ಮೀಂದರ:**— ಸುಂದರಿ, ನಾನು ನಿಜವಾಗಿಯೂ ನಿನ್ನ ವಿಷಯದಲ್ಲಿ ತುಂಬ ಪ್ರಸನ್ನನಾಗಿದ್ದೇನೆ !

**ಬೇಹುಳೆ:**— ನಿಜವಾಗಿಯೂ ?

**ಲಕ್ಷ್ಮೀಂದರ:**— ನಿಶ್ಚಿತವಾಗಿಯೂ !

**ಬೇಹುಳೆ:**— ಹೀಗಿದ್ದರೆ, ಆ ಆನೆಯಕೋರೆಯ ಕುಂಕುಮಕರಂಡ ಕವು ಇನ್ನು ನನಗೆ ದೊರೆಯದಿರದು !

**ಲಕ್ಷ್ಮೀಂದರ:**— ಜಾಣೆ, ಈಗ ಆ ಕರಂಡಕವು ನಿನಗೆ ದೊರೆಯದು. ಯಾಕೆಂದರೆ ನಾನದನ್ನು ನನ್ನ ಜನನಿಯ ಸಲುವಾಗಿ ಕೊಂಡಿಟ್ಟದ್ದೇನೆ. ಇನ್ನು ನಾನು ಮನೆಗೆ ಹೋದಬಳಿಕ ಆ ಕರಡಿಗೆಯನ್ನು ನನ್ನ ತಾಯಿಗೆ ಅರ್ಪಿಸು ವೆನು. (ಬೇಹುಳೆಯು ಸಣ್ಣ ಮೋರೆಮಾಡುವಳು) ಹೀಗೆ ವಿಷಾದಿತಳಾಗದಿರು. ಚಂಪಕನಗರದರಮನೆಯಲ್ಲಿ ಶಿವರಾತ್ರಿಯ ದಿವಸ ದೊಡ್ಡ ಉತ್ಸವವಾಗುವದು. ಬರುವ ಉತ್ಸವದ ಸಮಯದಲ್ಲಿ ನೀನು ನಿನ್ನ ತಂದೆಯೊಡನೆ ಅಲ್ಲಿಗೆ ಬಾ. ಆಗ್ಗೆ ನಾನು ನನ್ನ ತಾಯಿಯ ಕೈಯಿಂದ ಆ ಕುಂಕುಮ ಕರಡಿಗೆಯನ್ನು ನಿನಗೆ ಕೊಡಿಸುವೆನು.

**ಬೇಹುಳೆ:—** ನನಗೆ ಆ ಕುಂಕುಮಕರಡಿಗೆಯು ಬೇಕೆಬೇಕು. ನಾನು ಚಂಪಕನಗರಕ್ಕೆ ಬರುವೆನು. ನೀವು ಅಲ್ಲಿರುವಿರಾ ? ಆಗ್ಗೆ ನೀವು ನನ್ನನ್ನಾಗಲಿ, ನಿಮ್ಮ ಈ ವಚನವನ್ನಾಗಲಿ ಮರೆತಿದ್ದರೆ ?

**ಲಕ್ಷ್ಮೀಂದರ:—** ಚದುರೆ, ಮಾತು ಮರೆವರೂ ಮರೆಯಬಹುದು ! ನಿನ್ನನ್ನು ಮರೆಯುವದು ಮಾತ್ರ ಅಸಾಧ್ಯವಾದ್ದು ! ಮತ್ತು ನಿನ್ನನ್ನು ನೋಡುತ್ತಲೇ, ಮಾತಿನ ಸ್ಮರಣೆಯೂ ತಾನೇ ತಾನಾಗಿ ಆಗುವದು. ನೀನು ನಿಶ್ಚಿಂತಳಾಗಿರು. ಆ ಸಮಯಕ್ಕೆ ತಪ್ಪದೆ ಚಂಪಕನಗರಕ್ಕೆ ಬಾ. ( ಮೇಘಾವೃತವಾದ ಆಕಾಶದಲ್ಲಿ ಮಿಂಚುಮಿಂಚಹತ್ತುವದು. ಗುಡುಗಿನ ಸಪ್ಪಳವಾಗುವದು. ) ಅದೊ, ಮಳೆಯ ಲಕ್ಷಣವು ತೋರಹತ್ತಿದೆ. ಇನ್ನು ನಾನು ಹೊರಡಲಿಕ್ಕೆಬೇಕು. ಅಪ್ಪಣೆ ಕೊಡು. ಹೋಗುವೆನು. ( ಹೋಗುವನು. )

**ಬೇಹುಳೆ:—** ಅಯ್ಯೋ, ನಾನೇಕೆ ಕುಣಿದಿದ್ದೇನಾದೀತು ? ನಾನು ಕುಣಿದದ್ದರಿಂದಲೆ ಮೋಡಗವಿಯಿತು. ಮಳೆಯ ಲಕ್ಷಣವು ತೋರಹತ್ತಿತು. ಅವರು ಹೋಗಿಬಿಟ್ಟರು ! ಇನ್ನು ಅವರ ದರ್ಶನವೆಂದಾಗುವದೊ ಏನೊ ! ( ನಿಟ್ಟುಸಿರ ಬಿಡುವಳು. )

## ಎರಡನೆಯ ಪ್ರವೇಶ.

(ನದೀತೀರದ ವನಪ್ರದೇಶ. ಮನಸಾದೇವಿಯು ಪ್ರವೇಶಿಸುವಳು)

**ಮನಸಾ:—** ವಾಣಿಜ್ಯಯಾತ್ರೆಯಲ್ಲಿದ್ದ ಚಾಂದಸವದಾಗರನು ಇನ್ನು ದಕ್ಷಿಣ ಪಾಟಣಾನಗರಕ್ಕೆ ಹೋಗುವನು. ದಕ್ಷಿಣ ಪಾಟಣಾದ ಅರಸನಾದ ಚಂದ್ರಕೇತು ನನ್ನ ಭಕ್ತನಾಗಿದ್ದರೂ, ಚಾಂದಸವದಾಗರನ ಪರಮಸ್ನೇಹಿತನು. ಚಾಂದನು ತನ್ನ ಸ್ನೇಹಿತನಿಗೆ ನನ್ನ ಪೂಜೆಯನ್ನು ಮಾಡಲಾಗದೆಂದು ಬೋಧಿಸದಿರನು. ಮಿತ್ರನ ಉಪದೇಶದಿಂದ ಚಂದ್ರಕೇತು ನನ್ನ ಉಪಾಸನೆಯನ್ನು ಬಿಟ್ಟುಕೊಡುವ ಸಂಭವವಿದೆ. ಹೀಗಾಗಗೊಡುವದು ನನಗೆ ಇಷ್ಟವಾದ್ದಲ್ಲ. ಯಾವ ಉಪಾಯವನ್ನು ಯೋಚಿಸಲಿ ? ( ಗೇನಿಸಹತ್ತುವಳು ) ಚಾಂದಸವದಾಗರನು ಪಾಟಣಾಕ್ಕೆ ಹೋಗದಂತೆ ಮಾಡಬೇಕು. ಚಂದ್ರಕೇತು ಹಾಗು ಚಾಂದಸವದಾಗರರ ದರ್ಶನವಾಗದಂತೆ ಮಾಡಬೇಕು. (ಶೋಘಿನ ಧ್ವನಿಯಾಗುತ್ತಿದೆ. ) ಚಾಂದಸವದಾಗರನು ಪಾಟಣಾ ನಗರವನ್ನು ಸಮೀಪಿಸಿರುವನು.

ತನ್ನ ಆಗಮನವನ್ನು ಚಂದ್ರಕೇತುವಿಗೆ ಸೂಚಿಸುವದಕ್ಕಾಗಿ ತೋಫು ಹಾರಿಸುತ್ತಿರುವನು. ಅದೊ, ಚಂದ್ರಕೇತು ತೋಫಿನ ಸಪ್ಪಳವನ್ನು ಕೇಳಿ, ಉನ್ನತವಾದ ಅರಮನೆಯ ಮಾಳಿಗೆಯನ್ನೇರಿ ನದಿಯ ಕಡೆಗೆ ನೋಡುತ್ತಿದ್ದಾನೆ. ನಾನಿವನ ಕಣ್ಣಿಗೆ ಚಾಂದಸವದಾಗರನ ಹಡಗವು ಬೀಳದಿರುವದಕ್ಕಾಗಿ ಮಧ್ಯ ದಲ್ಲಿ ಗೋಡೆಯೊಂದನ್ನು ನಿರ್ಮಿಸಲಿಕ್ಕೆಬೇಕು. (ಮನಸಾದೇವಿಯ ಇಚ್ಛೆಯ ಮೇರಿಗೆ ನದಿಯಲ್ಲಿ ಚಾಂದಸವದಾಗರನ ಹಡಗದ ಮುಂದೆ ದೊಡ್ಡ ಗೋಡೆಯು ಕಾಣಹತ್ತುವದು. ಚಾಂದಸವದಾಗರನು ಅಕಸ್ಮಾತ್ತಾಗಿ ಎದ್ದ ಗೋಡೆಯನ್ನು ನೋಡಿ ಚಕಿತನಾಗುವನು. ಗೋಡೆಯನ್ನು ಹಾರಿಸಿಬಿಡುವ ಸಂಕಲ್ಪ ಮಾಡಿ ಕೊಂಡು ಗುಂಡುಗಳನ್ನು ಹಾರಿಸಹತ್ತುವನು. ಆಸ್ತೀಕನು ಪ್ರವೇಶಿಸುವನು).

**ಆಸ್ತೀಕ—** ಚಾಂದಸವದಾಗರನು ನದಿಯಲ್ಲಿಯ ಗೋಡೆಯನ್ನು ಧ್ವಂಸಮಾಡಲಿಕ್ಕೆ ತೋಫುಗಳನ್ನು ಉಪಯೋಗಿಸಿಕೊಳ್ಳುತ್ತಿದ್ದಾನೆ. ಭಯಂಕರ ವಾದ ಗುಂಡುಗಳ ಮಳೆಯಿಂದ ಅಲ್ಪಾವಕಾಶದಲ್ಲಿ ಗೋಡೆಯು ನಾಶವಾಗ ದಿರದು.

**ಮನಸಾ—** ಆಗಲಿ, ಅವನು ತನ್ನ ಶಕ್ತಿಯನ್ನು ತೋರಲಿ. ( ಚಾಂದ ಸವದಾಗರನ ಗುಂಡುಗಳಿಂದ ಸುತ್ತಲೂ ಹೊಗೆಮುಸುಕುವದು, ಕ್ಷಣ ಕಾಲ ಏನೂ ಕಾಣದಂತಾಗುವದು. ಕೆಲ ಹೊತ್ತಿನ ಮೇಲೆ ಹೊಗೆಯು ವಿರಲ ವಾಗುತ್ತನಡೆಯುವದು. ನದಿಯ ಮಧ್ಯದಲ್ಲಿಯ ಗೋಡೆಯು ಕಾಣದಾಗಿ ಹೋಗುವದು. )

**ಆಸ್ತೀಕ—** ಅವ್ವಾ, ನೋಡಿದೆಯಾ ? ಅಲ್ಪಾವಕಾಶದಲ್ಲಿಯೆ ಚಾಂದ ಸವದಾಗರನು ತನ್ನ ಪಥವನ್ನು ನಿಷ್ಕಂಟಕಮಾಡಿಕೊಂಡನು.

**ಮನಸಾ—** ಮಗು, ನೀನು ಚಿಂತಿಸದಿರು. ಪರಿಮಿತಶಕ್ತಿಯುಳ್ಳ ಚಾಂದಸವದಾಗರನ ಆಟವು ಅಪರಿಮಿತಶಕ್ತಿಯುಳ್ಳ ನನ್ನ ಮುಂದೆ ನಡೆಯದು ! ಈ ಸಲ ಅವನು ನನ್ನ ಮಾಯಾವ್ಯೂಹದಿಂದ ಸಹಜವಾಗಿ ಪಾರಾದನೆಂಬುದು ನಿಜ. ಆದರೆ ನಾನು ಇಷ್ಟರಿಂದಲೆ ಅವನ ಬೆನ್ನುಬಿಡುವವಳಲ್ಲ ! ಬಲವಾದ ವ್ಯೂಹವನ್ನು ರಚಿಸಿ, ಅವನನ್ನು ಭಯಂಕರ ವಿಪತ್ತಿನಲ್ಲಿ ಕೆಡಹುವೆನು. ನನಗೆ ಶರಣಾಗತನಾಗುವಂತೆ ಮಾಡುವೆನು.

ಆಸ್ತೀಕ— ಅವ್ವಾ, ಇನ್ನು ನೀನೇನು ಮಾಡುವೆ ?

ಮನಸಾ— ಮಗು, ನೀನು ಸುಮ್ಮನಿದ್ದು ನೋಡುತ್ತಿರು. ನಾನು ನನ್ನ ದಿವ್ಯಶಕ್ತಿಯ ಪ್ರತಾಪವನ್ನು ತೋರಿಸುವೆನು. ( ತನ್ನಲ್ಲಿಯೆ ಏನೊ ಮಾತಾಡಿ ಕೊಳ್ಳುವಳು. ಭಯಂಕರವಾದ ಬಿರುಗಾಳಿಯು ಬೀಸಹತ್ತುವದು. ಹಡಗವು ತತ್ತರಿಸಹತ್ತುವದು. ಚಾಂದಸವದಾಗರನೂ ನಾವಿಕರೂ ಗಾಬರಿಯಾಗಿ ಪ್ರಾಣರಕ್ಷಣೆಗೆ ಧಡಪಡಿಸಹತ್ತುವರು. ಹಡಗವು ಮುಳುಗಿಹೋಗುವದು. ) ಮಗು ನೋಡಿದೆಯಾ ? ಮಧುಕರ ಹಡಗವು ಜಲಸಮಾಧಿಯನ್ನು ಹೊಂದಿತು. ಹಡಗದಲ್ಲಿಯ ಅಮೌಲ್ಯ ವಸ್ತುಗಳೆಲ್ಲವೂ ಜಲದೇವತೆಗೆ ಅರ್ಪಿತವಾದವು. ಇನ್ನು ಸವದಾಗರನ ದುರವಸ್ಥೆಯನ್ನು ನೋಡು......

ಆಸ್ತೀಕ— ಸವದಾಗರನು ಮುಳುಗುತ್ತೇಳುತ್ತ ನಡೆದು ದಂಡೆಯನ್ನು ಸಮೀಪಿಸುವದರಲ್ಲಿರುವನು.

ಮನಸಾ— ಇದೊ, ಅವನ ಆರ್ತಸ್ವರವನ್ನು ಕೇಳು.

ಚಾಂದ— ಭಕ್ತವತ್ಸಲನೆ, ಆರ್ತಪರಿತ್ರಾಣನೆ, ಈಗ ನೀನೆಲ್ಲಿರುವೆ ? ಮಹಾದೇವನೆ, ನನ್ನನ್ನು ಈ ಸಂಕಟದಿಂದುದ್ಧರಿಸು ! ನಿನ್ನ ಸಹಾಯವಿಲ್ಲದೆ ನಾನು ಈ ಪ್ರಸಂಗದಲ್ಲಿ ಪಾರುಗಾಣೆನು ! ದೇವಾಧಿದೇವನೆ, ಭಕ್ತನ ಈ ಆರ್ತ ಸ್ವರವನ್ನು ಕೇಳಿ, ಸಹಾಯಕ್ಕೆ ಧಾವಿಸಿ ಬಾ !

ಮನಸಾ— ( ಚಾಂದನಿಗೆ ಕಾಣದಂತಿದ್ದು ) ಸವದಾಗರನೆ, ಭಯ ಗೊಳ್ಳದಿರು. ಈ ಸ್ಥಳದ ಅಧಿದೇವತೆಯನ್ನು ಮೊರೆಹೊಗು. ಅವಳು ಈ ಸಂಕಟದಿಂದ ನಿನ್ನನ್ನು ನಿಶ್ಚಯವಾಗಿಯೂ ಪಾರುಮಾಡುವಳು. ಅವಳ ಅನುಗ್ರಹದಿಂದ ನಿನ್ನ ಮಧುಕರ ಹಡಗವು ಮತ್ತೆ ಮೇಲಕ್ಕೆ ಬರುವದು. ನೀನು ನಿನ್ನ ಸಕಲಸಂಪತ್ತಿನಿಂದ ಸಮುಪೇತನಾಗಿ, ಮತ್ತೆ ನಿನ್ನ ದೇಶಕ್ಕೆ ಹೋಗಿ ಸುಖಿಸುವೆ.

ಚಾಂದ— ಯಾರು ನೀನು ? ಎಲ್ಲಿರುವೆ ?

**ಮನಸಾ—** ನಾನು ಯಾರಾದರೇನು ? ಎಲ್ಲಿದ್ದರೇನು ? ನೀನು ನಾನು ಹೇಳಿದಂತೆ ದೇವತೆಯನ್ನು ಮೊರೆಹೊಗು. ಇಲ್ಲದಿದ್ದರೆ ನೀನು ಈ ವಿಪತ್ತಿನಿಂದ ಮುಕ್ತನಾಗಲಾರೆ !

**ಚಾಂದ—** ದೇವದೇವೋತ್ತಮನೆ, ಈ ಸಮಯದಲ್ಲಿ ನೀನೆಲ್ಲಿ ? ನಿನ್ನ ಈ ಭಕ್ತನನ್ನು ಬದುಕಿಸಲಿಕ್ಕೆ ಧಾವಿಸಿ ಬಾ! ತಡಮಾಡಿದರೆ ನಾನು ಜೀವಿಸುವಂತಿಲ್ಲ! ಅಯ್ಯೊ, ಮುಣುಗುತ್ತಿರುವೆನು ! ಶಂಭೊ–ಶಂಕರ–ಶಿವ......

**ಮನಸಾ—** ಮಹಾದೇವನು ಈ ಸ್ಥಳಕ್ಕೆ ಅಭಿಪತಿಯಲ್ಲ ! ಇಲ್ಲಿ ಅವನ ಆಟವು ನಡೆಯದು !

**ಚಾಂದ—** ಹೀಗಿದ್ದರೆ, ಈಗ ನಾನು ಯಾರನ್ನು ಮೊರೆಹೊಗಬೇಕು ?

**ಮನಸಾ—** ಈ ಸ್ಥಳದ ಅಧಿದೇವತೆಯು ಮನಸಾದೇವಿಯು. ನೀನು ಮನಸಾದೇವಿಗೆ ಶರಣಾಗತನಾಗಲಿಕ್ಕೆ ಬೇಕು !

**ಚಾಂದ—** ಕುರುಡ ಮನಸೆಗೆ ಶರಣಾಗತನಾಗಲಿಯಾ ? ಆಗದು ! ಎಂತಹ ಭಯಂಕರ ಪ್ರಸಂಗವೊದಗಿದರೂ, ನಾನು ಆ ಕುರುಡೆಯನ್ನು ಮೊರೆಹೊಗುವನಲ್ಲ !

**ಮನಸಾ—** ಇನ್ನೂ ನಿನ್ನ ಗರ್ವವು ತಗ್ಗಿಲ್ಲವೆ ? ಈಗಲೂ ನೀನು ಮನಸಾದೇವಿಯ ಪೂಜೆಮಾಡಲಿಕ್ಕೆ ಒಡಂಬಡುವದಿಲ್ಲವೆ ? ಈ ಸಮಯದಲ್ಲಿ ನೀನು ಮನಸಾದೇವಿಗೆ ಶರಣಾಗತನಾದರೆ, ನಿನಗೆ ಯಾವ ಹಾನಿಯೂ ತಟ್ಟದು ! ಅವಳು ನಿನ್ನ ಎಲ್ಲ ಹಾನಿಯನ್ನು ತುಂಬಿಕೊಟ್ಟು, ನಿನ್ನನ್ನು ಸುಖರೂಪವಾಗಿ ನಿನ್ನ ಅರಮನೆಗೆ ಮುಟ್ಟಿಸುವಳು !

**ಚಾಂದ—** ಬೇಡ ! ನನಗೆ ನನ್ನ ಅರಮನೆ ಬೇಡ ! ಸುಖ ಬೇಡ ! ಆ ಕುರುಡೆಯ ಪೂಜೆಮಾಡುವದೂ ಬೇಡ !

**ಮನಸಾ—** ಹೀಗಿದ್ದರೆ ಮರಣಕ್ಕೆ ಪ್ರಸ್ತುತನಾಗು !

**ಚಾಂದ—** ಪ್ರಸ್ತುತನಾಗುವದೇನು ? ಅರ್ಧಮರ್ಧ ಸತ್ತೇಹೋಗಿರುವೆನು ! ಹರಹರಮಹಾದೇವ... (ಮುಳುಗಿಹೋಗುವನು).

**ಮನಸಾ**— (ಆಸ್ತಿಕನ ಬಳಿಗೆ ಬಂದು) ಮಗು, ನಾನು ಮಾಡಿದ್ದು ಒಳಿತಾಗಲಿಲ್ಲ! ಅನುಚಿತವಾಯಿತು!

**ಆಸ್ತೀಕ**— ಅವ್ವಾ, ಸವದಾಗರನು ನಿನ್ನ ವಿರೋಧಿಯು, ಸತ್ತು ಹೋಗುತ್ತಿರುವನು. ನೀನು ಅವನ ಮರಣಕ್ಕಾಗಿ ಹಳಹಳಿಸುವದೇಕೆ?

**ಮನಸಾ**— ಚಾಂದಸವದಾಗರನು ಸಾಯುವದು ನನಗೆ ಬೇಡ! ನನಗೆ ಬೇಕಾದ್ದು ಅವನ ಪೂಜೆ!

**ಆಸ್ತೀಕ**— ಅವನು ನಿನ್ನನ್ನು ಪೂಜಿಸಲಿಕ್ಕೆ ಒಪ್ಪಿಕೊಳ್ಳದ್ದರಿಂದಲೇ ಸಾಯುತ್ತಿರುವನು!

**ಮನಸಾ**— ಅವನು ಸತ್ತುಹೋದರೆ. ನಾನವನಿಂದ ಪೂಜೆಯನ್ನು ಹೊಂದಿದಂತಾಯಿತೆ? ಚಾಂದಸವದಾಗರನು ನಿನ್ನ ಪೂಜೆಯನ್ನು ಮಾಡಿದ ಹೊರತು, ಜಗತ್ತಿನಲ್ಲಿ ನಿನ್ನ ಪೂಜೆಯು ಶಾಶ್ವತವಾಗಿ ನೆಲೆಗೊಳ್ಳದು ಎಂದು ಮಹಾದೇವನು ಹೇಳಿದ್ದಾನೆ. ನಾನು ಏನಾದರೂ ಮಾಡಿ, ಚಾಂದನಿಂದ ಪೂಜೆಯನ್ನು ಹೊಂದಬೇಕಾಗಿದೆ! ಇಲ್ಲದಿದ್ದರೆ ನನ್ನ ದಿವ್ಯಶಕ್ತಿಯು ನಿರರ್ಥಕ ವಾದ್ದೆ ಸರಿ!

**ಆಸ್ತೀಕ**— ಹೀಗಿದ್ದರೆ, ಚಾಂದಸವದಾಗರನನ್ನು ಕೊಲ್ಲಬೇಡ. ಅವನು ಮತ್ತೆ ಜೀವಿಸಿರುವಂತೆ ಮಾಡು.

**ಮನಸಾ**— ಸವದಾಗರನೆ, ಮುಣುಗಬೇಡ. ಏಳು. ಈಜುತ್ತ ಹೋಗಿ ದಂಡೆಯನ್ನು ಸೇರು.

**ಆಸ್ತೀಕ**— ಅವ್ವಾ, ಅಲ್ಲಿ ನೋಡು. ಸವದಾಗರನು ಮತ್ತೆ ನೀರ ಮೇಲೆ ಕಾಣಿಸಿಕೊಂಡು, ಬದುಕುವವಕ್ಕೆ ಧಡಪಡಿಸುತ್ತಿದ್ದಾನೆ.

**ಮನಸಾ**— (ಚಾಂದನಿಗೆ ಕಾಣಿಸಿಕೊಂಡು) ಸವದಾಗರನೆ, ನಿನಗೆ ಪ್ರಾಣದಾನ ಕೊಟ್ಟಿರುವೆನು. ನಿನ್ನ ಮುಂಭಾಗದಲ್ಲಿ ಪದ್ಮಗಳು ರಾಶಿರಾಶಿಯಾಗಿ ಕಾಣಹತ್ತಿವೆ ನೋಡು. ನೀನು ಆ ಹೂಗಳ ಸಹಾಯದಿಂದ ಮುಂದೆ ನಡೆದು, ದಂಡೆಯನ್ನು ಮುಟ್ಟು.

**ಚಾಂದ—** ಕುರುಡೆಯೆ, ನನಗೆ ನಿನ್ನ ದಯೆಯು ಬೇಕಾಗಿಲ್ಲ. ನಿನಗೆ ಪದ್ಮೆಯೆಂಬ ಬೇರೊಂದು ಹೆಸರಿದೆಯಷ್ಟೆ? ಮುಂದಿರುವ ಈ ಪದ್ಮಗಳು ನಿನ್ನ ನಾಮಧಾರಿಗಳು. ನಾನಿವುಗಳನ್ನು ಮುಟ್ಟಲಾರೆನು. ಇವುಗಳ ಸಹಾಯದಿಂದ ಮುಂದೆ ಹೋಗಲಾರೆನು. ಮುಖ್ಯವಾಗಿ ನಿನ್ನ ಕೃಪೆಯಿಂದ ಬದುಕುವದು ನನಗೆ ಬೇಡಾಗಿದೆ! (ಮುಳುಗುವನು).

**ಮನಸಾ—** ನಿನಗೆ ಬೇಕಾಗಲಿ, ಬೇಕಾಗದಿರಲಿ, ನಾನು ನಿನ್ನನ್ನು ಬದುಕಿಸಲೇಬೇಕಾಗಿದೆ. ನಿನಗೆ ನಿನ್ನ ಜೀವವು ಬೇಕಿದ್ದರೆ, ಇದು ನನ್ನ ದಯ ವೆಂದು ಭಾವಿಸು. ಜೀವವು ಬೇಡಾಗಿದ್ದರೆ, ಇದು ನನ್ನ ನಿರ್ದಯವೆಂದು ತಿಳಿದುಕೊಳ್ಳು. ನೀನು ಹೇಗೆ ಭಾವಿಸಿಕೊಂಡರೂ ಚಿಂತೆಯಿಲ್ಲ. ಆದರೆ ನಾನು ನಿನ್ನನ್ನು ಈಗಲೇ ಕೊಲ್ಲಲಾರೆನೆಂಬುದು ನಿಶ್ಚಿತವಾದದ್ದು. ಯಾಕೆಂದರೆ, ನಿನ್ನ ಏಕನಿಷ್ಠೆಯನ್ನು ನೋಡಿ ನನಗೆ ಪರಮಾನಂದವಾಗಿದೆ. ನಿನ್ನಂತಹ ನಿಷ್ಠಾವಂತ ನಿಂದ ಪೂಜೆಯನ್ನು ಪಡೆಯಬೇಕೆಂಬ ಲೋಭವು ನನ್ನಲ್ಲಿ ಹೆಚ್ಚುವದರಲ್ಲಿದೆ. ಒಂದಿಲ್ಲೊಂದು ದಿನ ನಿನ್ನಿಂದ ಪೂಜೆಯನ್ನು ಮಾಡಿಸಿಕೊಂಡೇ ಬಿಡುವೆನೆಂಬ ಆತ್ಮವಿಶ್ವಾಸವು ನನಗಿದೆ. (ಮನಸೆಯು ಆಸ್ತೀಕನನ್ನು ಕರೆದುಕೊಂಡು ಕಾಣ ದಾಗಿ ಹೋಗುವಳು. ಚಾಂದನು ಮತ್ತೆ ತೇಲಹತ್ತುವನು. ಮುಳುಗುತ್ತೇಳುತ್ತ ಮಂದಗತಿಯಿಂದ ಮುಂದೆ ಸಾಗುವನು. ದಂಡೆಯನ್ನು ಮುಟ್ಟುವನು. ಚಂದ್ರ ಕೇತುವು ಪರಿವಾರದೊಡನೆ ಪ್ರವೇಶಿಸುವನು).

**ಚಂದ್ರಕೇತು—** (ನಿಶ್ಯಕ್ತನಾಗಿ ಬೀಳುವದರಲ್ಲಿದ್ದ ಚಾಂದನನ್ನು ಹಿಡಿದು) ನೀನಾರು? (ದಿಟ್ಟಿಸಿ ನೋಡಿ) ನೀನು ಚಾಂದಸವದಾಗರನಲ್ಲವೆ?

**ಚಾಂದ—** ಬಾಲಮಿತ್ರನೆ, ವಿಧಿಯವಿಡಂಬನೆಯಲ್ಲಿ ಸಿಕ್ಕು ಈ ದುರವಸ್ಥೆಗೊಳಗಾಗಿದ್ದೇನೆ. ದೇಹದಲ್ಲಿ ತ್ರಾಣವಿಲ್ಲದಾಗಿದೆ. ಭಯಂಕರವಾದ ನೀರಡಿಕೆಯಾಗಿದೆ. ಮಾತಾಡಲಿಕ್ಕೆ ನಾಲಿಗೆ ಏಳದಾಗಿದೆ......

**ಚಂದ್ರಕೇತು—** (ಸೇವಕನು ಹಾಲು ತರುವಂತೆ ಆಜ್ಞಾಪಿಸಿ) ಗೆಳೆಯನೆ, ಬಹು ದಿನಗಳ ತರುವಾಯ ಪುನರ್ದರ್ಶನ ಕೊಟ್ಟೆ. ನಿನ್ನ ದರ್ಶನ ದಿಂದ ನನಗೆ ಪರಮಾನಂದವಾಗಿದೆ. ನೀನು ಹಾರಿಸಿದ ಮಿತ್ರತ್ವಸೂಚಕ

ಶೋಘನ ದನಿಯನ್ನು ಕೇಳಿದೆನು. ಮನೆಯ ಮೇಲ್ಮಾಳಿಗೆಯಲ್ಲಿ ನಿಂತು ಆಗಮನ ವನ್ನು ನೋಡುತಲಿದ್ದೆನು. ಆದರೆ ಬಿರುಗಾಳಿಯ ಪ್ರಬಲ ಹೊಡೆತದಿಂದ ಮುಂದೆ ನನಗೆ ಏನೂ ಕಾಣದಾಯಿತು. ಅನರ್ಥವೊದಗಿರಬಹುದೆಂದು ಭಾವಿಸಿ, ಸೇವಕರೊಡನೆ ಇಲ್ಲಿಗೆ ಬಂದೆನು.

**ಚಾಂದ**— ಈಗ ನಾನೇನೂ ಮಾತಾಡಲಾರದವನಾಗಿರುವೆನು. ನೀರಡಿಕೆಯು ನನ್ನನ್ನು ಬಲವಾಗಿ ಬಾಧಿಸುತ್ತಿದೆ. (ಸೇವಕರು ಹಾಲಿನಪಾತ್ರೆಯನ್ನು ತಂದುಕೊಡಬಂದರು. ಚಾಂದನು ಆ ಪಾತ್ರೆಯನ್ನು ಅವಸರದಿಂದ ಕಸಿದುಕೊಂಡು ಕುಡಿಯುವದರಲ್ಲಿದ್ದನು. ಇಷ್ಟರಲ್ಲಿ ಅರಮನೆಯಲ್ಲಾದ ಶಂಖ-ಜಾಂಗಟೆ ಮೊದಲಾದವುಗಳ ಸ್ವರವು ಕೇಳಬರುವದು) ಮಿತ್ರನೆ, ಅರಮನೆಯಲ್ಲಿ ಯಾವ ಉತ್ಸವ ನಡೆದಿದೆ ?

**ಚಂದ್ರಕೇತು**— ಬಿರುಗಾಳಿಯ ಅಪಘಾತದಿಂದ ನಮಗೆ ಯಾವ ಅಪಾಯವೂ ತಟ್ಟಲಿಲ್ಲ. ನಮ್ಮ ಈ ಸುರಕ್ಷಿತೆಯ ಸಲುವಾಗಿ ಅರಮನೆಯಲ್ಲಿ ದೇವಿಯ ಪೂಜೆಯು ಸಡಗರದಿಂದ ನಡೆದಿದೆ. ನಾಗರಿಕರೆಲ್ಲರೂ ಆನಂದದಿಂದ ದೇವಿಯ ಮಂದಿರದಲ್ಲಿ ಸಮವೇತರಾಗಿ ಉತ್ಸವವನ್ನು ನಡಿಸಿದ್ದಾರೆ.

**ಚಾಂದ**— ಯಾವ ದೇವಿಯ ಪೂಜೆ ? ಚಂಡೀದೇವಿಯದೆ ?

**ಚಂದ್ರಕೇತು**— ಅಲ್ಲ. ಮನಸಾದೇವಿಯ ಪೂಜೆಯು ನಡೆದಿದೆ. (ಚಾಂದನು ಪಾನಪಾತ್ರೆಯನ್ನು ಬಿಸಾಟಬಿಟ್ಟು, ಮೈಯಲ್ಲಿಯ ಎಲ್ಲ ಶಕ್ತಿಯನ್ನು ಏಕೀಕರಿಸಿ, ಎದ್ದು ನಿಲ್ಲುವನು. ಜೋಲಿಹೊಡೆಯುತ್ತ ಮುಂದೆ ಸಾಗುವನು.) ಮಿತ್ರನೆ, ಇದೇನು! ಹೀಗೇಕೆ ಮಾಡುವೆ ? ಎಲ್ಲಿಗೆ ಹೋಗುವೆ ?

**ಚಾಂದ**— ( ಕೆಂಗಣ್ಣಿನಿಂದ ಹೊರಳಿನೋಡಿ ವ್ಯಂಗ್ಯದಿಂದ ) ನಾನು ನಿನ್ನ ಗೆಳೆಯನೆ ?

**ಚಂದ್ರಕೇತು**— ಅಲ್ಲದೆ ಮತ್ತೇನು ? ದಾರುಣವಾದ ನೀರಡಿಕೆಯಿಂದ ತಳಮಳಿಸುತಲಿದ್ದೆ ! ಇಂತಹ ನೀನು ಪಾನಪಾತ್ರವನ್ನು ಬಿಸಾಟಿ ನಡೆದಿರುವೆ ! ಕಾರಣವೇನು ?

**ಚಾಂದ**— ಅಯ್ಯೋ ಪ್ರಾಣಮಿತ್ರನೇ, ಏನೆಂದು ಹೇಳಲಿ?

**ಚಂದ್ರಕೇತು**— ನಿನಗೆ ಹುಚ್ಚು ಹಿಡಿದಿರುವಂತೆ ಕಾಣುತ್ತಿದೆ! ನಿಲ್ಲು!

**ಚಾಂದ**— ನಾನು ಹುಚ್ಚನಹುದು! ಸೆರೆಗುಡಕನೂ ಅಹುದು! ಭಯಾನಕವಾದ ನೀರಡಿಕೆಯಿಂದ ಬಳಲಿ ಬೆಂಡಾದವನೂ ಅಹುದು! ಆದರೂ ನಾಡಿಗಳು ಸಂಚರಿಸುತ್ತಿವೆ. ಮೈಯೊಳಗಿನ ಈ ನಾಡಿಗಳು ಮಂದಗತಿಯುಳ್ಳವಾಗಿದ್ದರೂ, ನಿಶ್ಚೇಷ್ಟವಾಗಿಲ್ಲ! ನೀನು ವಿಷವನ್ನು ಕುಡಿಸಬಂದಿದ್ದೆ! ನಾನು ಕುಡಿಯಲಾರದೆ ಬಿಸಾಟಿದೆನು.

**ಚಂದ್ರಕೇತು**—ಗೆಳೆಯನೆ, ಹೋಗದಿರು! ನಿಲ್ಲು! ನಿನ್ನ ಮನಸ್ಥಿತಿಯು ನನಗೆ ಹೊಳೆಯದಾಗಿದೆ! ನಿಜವಾಗಿ ಏನಾಯಿತೆಂಬುದನ್ನು ವಿವರಿಸಿ ಹೇಳು. ನಾನು ತಕ್ಕ ವ್ಯವಸ್ಥೆಯನ್ನು ಮಾಡಿಸುವೆನು.

**ಚಾಂದ**— ಬೇಡ! ನನಗೆ ಏನೂ ಬೇಡ! ಆ ಕುರುಡ ಮನಸೆಯ ಪೂಜೆಯು ನಡೆದಿರುವಲ್ಲಿ ಈ ಚಾಂದಸವದಾಗರನಿಗೆ ಪ್ರವೇಶಾಧಿಕಾರವಿಲ್ಲ! ಈ ಚಾಂದಸವದಾಗರನು ಕುರುಡ ಮನಸೆಯ ಪೂಜೆಯನ್ನು ಮಾಡಲಾರನು! ನೋಡಲಾರನು! ಇಷ್ಟೇ ಅಲ್ಲ; ಪೂಜೆಯ ಸುದ್ದಿಯನ್ನು ಕೇಳಿ ಸಹಿಸಲಾರನು! ಹಾ—ಹಾ—ಹಾ— (ಉನ್ಮಾದನಂತೆ ಮುಂದೆಹೋಗುವನು).

---

## ಮೂರನೆಯ ಅಂಕ

### ಮೊದಲನೆಯ ಪ್ರವೇಶ

(ಚಂಪಕನಗರದ ಅರಮನೆ. ಒಂದು ಕೋಣೆಯಲ್ಲಿ ಮನಸಾದೇವಿಯು ಮಂಗಲ ಘಟವು ಸ್ಥಾಪಿತವಾಗಿದೆ. ಪೂಜೆಯ ಸಾಹಿತ್ಯಗಳೆಲ್ಲವೂ ಸಿದ್ಧವಾಗಿವೆ. ಸನಕೆಯೂ ನೀಲನೂ ಇರುವರು.)

**ಸನಕೆ**— ದುರ್ಯೋಧನನು ಈ ಅರಮನೆಯನ್ನು ಚನ್ನಾಗಿ ಕಾಯುತ್ತಿರುವನಷ್ಟೆ? ಅರಮನೆಯ ಪ್ರತಿಯೊಂದು ಬಾಗಿಲಕ್ಕೂ ಸೇವಕರ ಕಾವಲಿದೆಯಷ್ಟೆ?

**ನೀಲ** — ರಾಜ್ಞಿಯವರೆ, ಅರಮನೆಯ ಕಾವಲು ಗಬಿಯಾಗಿದೆ. ನೀವು ತಿಲಮಾತ್ರವೂ ಭಯಗೊಳ್ಳುವ ಕಾರಣವಿಲ್ಲ! ಆದರೆ ಜ್ಯೋತಿಷಿಯ ಭವಿಷ್ಯ ವನ್ನು ನಾನು ನಂಬಲಾರದವನಾಗಿರುವೆನು. ಚಾಂದಸವದಾಗರರ ಭದ್ರವಾದ ಈ ಅರಮನೆಯನ್ನು ಕಳ್ಳರು ಪ್ರವೇಶಿಸುವರೆಂಬುದು ಅಸಂಭವನೀಯ ಸಂಗತಿಯು!

**ಸನಕೆ**— ಏಕೆ ಅಸಂಭವನೀಯವಾದ್ದು ? ಇವರು ಮನೆಬಿಟ್ಟುಹೋಗಿ ಇಪ್ಪತ್ತು ವರ್ಷಗಳ ಮೇಲಾಯಿತು! ಇವರು ಇನ್ನು ಮನೆಗೆ ಬರುವರೆಂಬ ಆಶೆಯು ನನಗೆ ಸಹ ಇಲ್ಲದಾಗಿಹೋಗಿತ್ತು. ಇಂತಹ ಸ್ಥಿತಿಯಲ್ಲಿ ಕಳ್ಳರು ಇವರ ಭಯವನ್ನು ಹಿಡಿಯುವದೆಂತು ? ಅರಸನಿಲ್ಲದ ಅರಮನೆಯು ಅರಕ್ಷಿತ ವೆಂದು ಭಾವಿಸಿ, ಕಳ್ಳರು ತಮ್ಮ ಕಾರ್ಯಕ್ಕೆ ಏಕೆ ಪ್ರವೃತ್ತರಾಗಬಾರದು ?

**ನೀಲ**— ಅರಸನಿರಲಿ, ಇರದಿರಲಿ, ಅರಮನೆಯು ಯಾವಾಗಲೂ ಶಸ್ತ್ರ ಧಾರಿಗಳಾದ ಸೈನಿಕರಿಂದ ಸುರಕ್ಷಿತವಾಗಿದೆ. ಮತ್ತೊಂದು ಮಾತೇದರೆ, ಮೊನ್ನೆ ಯುವರಾಜರು ನಿಭಸಿನಗರಕ್ಕೆ ಹೋಗಿ ಪ್ರಭುಗಳು ಕುಶಲದಿಂದಿದ್ದ ವರ್ತಮಾನ ವನ್ನು ತಂದಿದ್ದಾರೆ.

**ಸನಕೆ**—ಇವರು ಕ್ಷೇಮದಿಂದಿರುವ ಸಂಗತಿಯನ್ನು ಅನ್ಯರು ಅರಿಯರು' ನಾಗರಿಕರಲ್ಲಿಯ ಬಹುಜನರು ಇವರು ಮನಸಾದೇವಿಯ ಶಾಪಕ್ಕೊಳಗಾಗಿ ಶತ್ರುವಿನ ಕೈವಶರಾಗಿ ಬಂದಿಗಳಾಗಿ ಕಷ್ಟದಿಂದ ಕಾಲಹರಣಮಾಡುತ್ತಿದ್ದಾ ರೆಂದು ಮಾತಾಡಿಕೊಳ್ಳುತ್ತಿರುವರು.

**ನೀಲ**— ಮಂದಿಯ ಮಾತು ತಕ್ಕೊಂಡು ಮಾಡುವದೇನು! ಸಾಯು ಸವದಾಗರರು ಪ್ರತ್ಯಕ್ಷ ನೋಡಿಬಂದವರು. ಅವರ ಮಾತನ್ನು ನಂಬಲಿಕ್ಕೆ ಅಡ್ಡಿಯಿಲ್ಲದಾಗಿದೆ.

**ಸನಕೆ**—ಪ್ರವಾಸದಲ್ಲಿರುವ ಪ್ರಾಣನಾಥರ ಕ್ಷೇಮಕ್ಕಾಗಿಯೂ, ಇದ್ದೊಬ್ಬ ಮಗನ ದೀರ್ಘಾಯುಷ್ಯ ಪ್ರಾಪ್ತಿಗಾಗಿಯೂ ನಾನು ಇಂದಿನ ರಾತ್ರಿಯಲ್ಲಿ ಷೋಡ ಶೋಪಚಾರಗಳಿಂದ ಮನಸಾದೇವಿಯ ಪೂಜೆಯನ್ನು ಮಾಡಬೇಕೆಂದಿದ್ದೇನೆ. ನಾನು ಈ ಪೂಜೆಯನ್ನು ಗುಪ್ತರೀತಿಯಿಂದ ಮಾಡಬೇಕಾಗಿದೆ. ನೀನು ಈ ಸುದ್ದಿಯನ್ನು ಪ್ರಕಾಶಪಡಿಸಲಾಗದು.

**ನೀಲ—** ರಾಜ್ಞಿಯವರೆ, ಚಾಂದಸವದಾಗರರ ಈ ಪ್ರಾಸಾದದಲ್ಲಿ ಮನೆಸೆಯ ಪೂಜೆಯೆ ? ಆಗದು ! ಸರ್ವಥಾ ಆಗದು !

**ಸನಕೆ—** ಏಕೆ ಮಾಡಕೂಡದು? ಲಕ್ಷ್ಮೀಂದರರನ ಅಂಗರಕ್ಷರ ಮಯೂರವು ನಿಛನಿನಗರದಲ್ಲಿ ಹಾವನ್ನು ಕೊಂದಿದೆ. ಇದರಿಂದ ಲಕ್ಷ್ಮೀಂದರನು ಹಾವು ಕೊಂದಪಾಪಕ್ಕೆ ಗುರಿಯಾದಂತಾಯಿತು ! ಅವನು ತನ್ನ ಈ ಪಾಪದ ಪ್ರಾಯಶ್ಚಿತ್ತವನ್ನು ತಕ್ಕೊಳ್ಳಲಾರನು- ನಾನು ತಕ್ಕೊಳ್ಳುವೆನು ! ಉಂಟಾದ ಪಾಪವನ್ನು ಮನಸಾದೇವಿಯ ಪೂಜೆಮಾಡಿ ಅನುಗ್ರಹ ಸಂಪಾದಿಸಿ ಪರಿಹಾರಮಾಡಿಕೊಳ್ಳುವೆನು ! ಜ್ಯೋತಿಷಿಯೂ ಮನಸಾದೇವಿಯ ಪೂಜೆಮಾಡೆಂದು ನನಗೆ ಬೋಧಿಸಿದ್ದಾನೆ. ನಾನು ಅವನ ಸಮಕ್ಷಮ ಮನಸಾದೇವಿಯನ್ನು ಷೋಡಶೋಪಚಾರಗಳಿಂದ ಪೂಜಿಸುವೆನೆಂದು ಪ್ರಾರ್ಥಿಸಿಕೊಂಡಿದ್ದೇನೆ. ಮತ್ತೊಂದು ಮಾತೆಂದರೆ, ಮಾತೆಗೆ ಏಕಮಾತ್ರ ಪುತ್ರನ ಹಿತಕ್ಕಿಂತಲೂ ಹೆಚ್ಚಿನ ಸಂಗತಿ ಮತ್ತೊಂದಿಲ್ಲ ! ನಾನು ಲಕ್ಷ್ಮೀಂದರನ ಕಲ್ಯಾಣಕ್ಕಾಗಿ ಏನನ್ನಾದರೂ ಮಾಡಬಲ್ಲೆನು !

**ನೀಲ—** ರಾಣಿಯವರೆ, ನಾನು ತಮ್ಮ ಸೇವಕನು. ತಮ್ಮ ಅನ್ನದಿಂದ ಬಳೆದ ದಾಸಾನುದಾಸನು. ಪ್ರಭುಗಳ ಏಕನಿಷ್ಠ ಭಕ್ತನು. ನಿಮಗೆ ಪ್ರತಿಮಾತಾಡುವ ಇಲ್ಲವೆ ನಿಮಗೆ ಈ ಕಾರ್ಯವನ್ನು ಮಾಡಬೇಡಿರೆಂದು ಹೇಳುವ ಯೋಗ್ಯತೆ ನನ್ನದಲ್ಲ ! ಆದರೂ ತಮ್ಮ ಈ ಕಾರ್ಯವನ್ನು ನೋಡಿ ನನಗೆ ವ್ಯಥೆಯಾಗುತ್ತಿದೆ. ಯಾವ ಪ್ರಭುಗಳು ಮನಸೆಯ ವಿರೋಧವನ್ನು ಬಳಸಿ ಕಡುಕಷ್ಟಕ್ಕೀಡಾದರೋ ಅವರು ತಮ್ಮ ಹಟವನ್ನು ಬಿಡದಿರುವಾಗ, ಒದಗಿದ ಅನರ್ಥಗಳನ್ನು ಧೈರ್ಯದಿಂದ ಸಹಿಸಿಕೊಳ್ಳುತ್ತಿರುವಾಗ, ಅವರ ಧರ್ಮಪತ್ನಿಯವರಾದ ನೀವು ಮನೆಸೆಯ ಪೂಜೆಗೆ ಪ್ರವೃತ್ತರಾಗುವದು ತರವಾದೀತೆ ? ನಾನಂತೂ ಅರಮನೆಯಲ್ಲಿ ನಡೆಯುತ್ತಿರುವ ಪೂಜೆಯನ್ನು ನೋಡಲಾರೆನು. ಪ್ರಭುಗಳೇ, ನೀವು ನನ್ನನ್ನು ನಿಮ್ಮ ಸಂಗಡ ಏಕೆ ಕರೆದೊಯ್ಯಲಿಲ್ಲ ? ನಿಮ್ಮೊಡನೆ ನಾನಿದ್ದರೆ, ಅರಮನೆಯಲ್ಲಿ ನಡೆದ ಈ ವಿಪರೀತ ಪ್ರಸಂಗವನ್ನು ಕಾಣುವ ದುರ್ಯೋಗವನ್ನು ಹೊಂದುತ್ತಿದ್ದಿಲ್ಲ !

**ಸನಕೆ—** ವಿಶ್ವಾಸುಕ ಸೇವಕನೆ, ವ್ಯಥೆಗೊಳ್ಳದಿರು ! ವಿಪರೀತ ಕಾರ್ಯವೆಂದು ಚಿಂತಿಸದಿರು ! ನಾನು ಪತಿ-ಪುತ್ರರ ಹಿತಕ್ಕಾಗಿಯೆ ಜ್ಯೋತಿಷಿಯ ಹೇಳಿಕೆ

ಯಂತೆ ಈ ಕಾರ್ಯವನ್ನು ನಡಿಸಿದ್ದೇನೆ. ಇದರಲ್ಲಿ ನನ್ನದೇನಾದರೂ ದುರುದ್ದೇಶ ವಿದೆಯೆ ?

ನೀಲ— ಒಡತಿಯರೇ, ಆ ಜ್ಯೋತಿಷಿಯು ಠಕ್ಕನು ಏಕಾಗಿರಬಾರದು ? ಇಲ್ಲವೆ ಮನಸಾದೇವಿಯೆ ಜ್ಯೋತಿಷಿಯ ವೇಷದಿಂದ ಕಾಣಿಸಿಕೊಂಡು ನಿಮ್ಮನ್ನು ಮೋಸಗೊಳಿಸಿರಬಾರದೇಕೆ ? ಮನಸೆಯು ಮಾಯಾವಿನಿಯು: ಪ್ರಭುಗಳನ್ನು ವಂಚಿಸಿ ಮಹಾಜ್ಞಾನವನ್ನಪಹರಿಸಲಿಲ್ಲವೆ ? ಶಿಷ್ಯರನ್ನು ಮೋಸಗೊಳಿಸಿ ಧನ್ವಂತರಿ ಗುರುಗಳನ್ನು ಮರಣಕ್ಕೀಡುಮಾಡಲಿಲ್ಲವೆ ? ಹೀಗೆಯೆ ಇಂದು ನಿಮ್ಮನ್ನು ಠಕ್ಕಿಸಿ, ನಿಮ್ಮ ದುರ್ಬಲಮನಸ್ಸಿನ ದುರುಪಯೋಗಮಾಡಿಕೊಂಡು ಅರಮನೆ ಯಲ್ಲಿ ವಿಪರೀತ ಪ್ರಸಂಗವು ನಡೆಯಲಿಕ್ಕೆ ಉತ್ತೇಜನವನ್ನೇಕೆ ಕೊಟ್ಟಿರಬಾರದು ? ಏನೆ ಇರಲಿ, ಕಾಲವು ವಿಪರೀತವಾಗಿದೆ ! ಸಾವಧಾನತೆಯಿಂದ ನಡೆದು ಹೋಗು ವದು ವಿಹಿತವಾದದ್ದು ! ನಂಬುಗೆಯ ಸೇವಕನಾದ ನಾನು ನಿಮಗೆ ತಕ್ಕ ಸಲಹೆ ಗಳನ್ನು ಕೊಟ್ಟಿದ್ದೇನೆ. ಇನ್ನು ನಿಮ್ಮ ಇಷ್ಟವಿರುವಂತೆ ಆಚರಿಸಬಹುದು. ನಾನಿನ್ನು ಹೋಗುವೆನು. (ಹೋಗುವನು. ಸನಕೆಯು ಅವನ ಕಡೆಗೆ ನೋಡು ತ್ತಿರುವಳು.)

ಸನಕೆ— ಕೇವಲ ವಿಶ್ವಾಸುಕ ಸೇವಕನಿವನು ! ಇವನು ಹೇಳಿದ್ದು ನಿಜ ವಿರಬಹುದೆ ? ಮನಸಾದೇವಿಯು ನನ್ನನ್ನು ಮೋಸಗೊಳಿಸಿರಬಹುದೆ ? ಛೀ, ಹೀಗೆಂದಿಗೂ ಆಗದು ! ದೇವಿಯುವಳು. ಮಾನವಿಯಂತೆ ಕಪಟಾಚರಣೆ ಮಾಡ ಲಾರಳು. ಇಂದಿನ ಜ್ಯೋತಿಷಿಯನ್ನು ನಾನಿದುವರೆಗೆ ಕಂಡವಳಲ್ಲ. ಆದರೂ ಅವನು ಮೋಸಗಾರನೆಂದು ನಾನೆಂದೂ ನಿರ್ಧರಿಸಲಾರೆನು ! ಅವನು ನನ್ನ ಆಯುಷ್ಯದ ಗತಸಂಗತಿಗಳನ್ನೆಲ್ಲ ಒಂದೂ ತಪ್ಪಿರದಂತೆ ತಿಳುಹಿದನು ! ಏನು ಮಾಡಿದರೆ, ಭವಿಷ್ಯತ್ಕಾಲದಲ್ಲಿ ಸುಖಪ್ರಾಪ್ತಿಯಾದೀತೆಂಬುವನ್ನು ಸೂಚಿಸಿದನು. ನಾನು ಅವನ ಹೇಳಿಕೆಯಂತೆ ನಡೆದು ಏಕೆ ಪರೀಕ್ಷಿಸಲಾಗದು ? ಒಂದೇ ಒಂದು ದಿನದಲ್ಲಿ ಆರೂ ಮಕ್ಕಳನ್ನು ಕಳೆದುಕೊಂಡು ಸಂತಪ್ತಳಾದವಳು ನಾನು ! ಇದ್ದೊಬ್ಬ ಮಗನು ದೀರ್ಘಜೀವಿಯಾಗಲೆಂದು ತಪಶ್ಚರ್ಯಮಾಡುತ್ತಿದ್ದವಳು ನಾನು. ಇಂತಹ ನಾನು ಪುತ್ರನ ಮಂಗಲಕ್ಕಾಗಿ ಮನಸಾದೇವಿಯ ಪೂಜೆ ಯನ್ನು ಮಾಡಿದರೆ ತಪ್ಪೇನು ? ಇದರಿಂದ ಮಹಾದೇವನಿಗೂ ಚಂಡೀದೇವಿಗೂ

ಕೋಪವುಂಟಾಗುವದೆ? ಅಮ್ಮಾ, ಚಂಡೀದೇವಿ, ನೀನೂ ಪುತ್ರವತಿಯಾದ ಸತಿಯು. ನಾನು ಕೇವಲ ಸಂತಾನದ ಹಿತಕ್ಕಾಗಿಯೆ ಮನಸಾದೇವಿಯ ಪೂಜೆ ಮಾಡುವೆನೆಂಬದನ್ನು ವಿಚಾರಿಸಿ ನನ್ನನ್ನು ಕ್ಷಮಿಸು? ಮಹಾದೇವನೆ, ನೀನೂ ನನ್ನನ್ನು ಕ್ಷಮಿಸು. (ಇಬ್ಬರನ್ನೂ ಸ್ಮರಿಸಿ ನಮಸ್ಕರಿಸುವಳು) ಚಂದನಾ...... (ದಾಸಿಯು ಪ್ರವೇಶಿಸುವಳು).

**ಚಂದನಾ**— ರಾಣಿಯವರೆ, ಏನಪ್ಪಣೆ?

**ಸನಕೆ**— ಅರಮನೆಯ ಪ್ರತಿಯೊಂದು ದ್ವಾರದಲ್ಲಿ ಸಶಸ್ತ್ರ ಶಿಪಾಯಿಗಳು ಪಹರಿಮಾಡುತ್ತಿರುವರು. ದುರ್ಯೋಧನನು ಅರಮನೆಯ ರಕ್ಷಣೆಯ ಭಾರ ವನ್ನು ಹೊತ್ತು, ಅತ್ತಿತ್ತ ಸಂಚರಿಸುತ್ತಿರುವನು. ನೀನು ಹೋಗಿ, ಇವರೆಲ್ಲರಿಗೆ ಮತ್ತೊಮ್ಮೆ ಎಚ್ಚರಿಕೆಕೊಟ್ಟು ಬಾ. ಇಂದು ಅರಮನೆಯನ್ನು ಪ್ರವೇಶಿಸುತ್ತಿದ್ದ ಕಳ್ಳನು ಸಾಮಾನ್ಯನಲ್ಲ. ಬಲು ಗಟ್ಟಿಗನು. ಅರಮನೆಯನ್ನು ಪ್ರವೇಶಿಸುತ್ತಲೆ, ಅವನ ಸಂಹಾರವಾಗಲಿಕ್ಕೆ ಬೇಕು!

**ಚಂದನಾ**— ಅಮ್ಮನವರೆ, ನೀವು ನಿಶ್ಚಿಂತರಾಗಿರ್ರಿ. ಪ್ರಹರಿಗಳು ಖಡ್ಗ ವನ್ನು ಒರೆಯಿಂದ ಹಿರಿದುಕೊಂಡು ಸಿದ್ಧರಾಗಿ ನಿಂತಿರುವರು. ಕಳ್ಳನು ಅರಮನೆ ಯಲ್ಲಿ ಕಾಲಿಟ್ಟೊಡನೆಯೆ ಪ್ರಹರಿಯ ಖಡ್ಗಕ್ಕೆ ಬಲಿಯಾಗುವನು.

**ಸನಕೆ**— ಲಕ್ಷ್ಮೀಂದರನು ಮಲಗಿರುವನಷ್ಟೆ?

**ಚಂದನಾ**— ಯುವರಾಜರು ನಿದ್ರಿಸುತ್ತಿರುವರು.

**ಸನಕೆ**— ಅವನ ನಿದ್ದೆಯು ಗೊತ್ತಿನದಲ್ಲ. ಒಂದೊಂದು ದಿನ ಅವನು ಮಧ್ಯರಾತ್ರಿಯಲ್ಲಿಯೆ ನಿದ್ರೆಯಿಂದೇಳುವನು. ಇಂದಿನ ರಾತ್ರಿಯಲ್ಲಿ ಅವನು ಇಲ್ಲಿಗೆ ಬರಕೂಡದು. ನೀನು ಈ ಕೋಣೆಯ ಬಾಗಿಲಕಾಯುತ್ತಿರು. ಲಕ್ಷ್ಮೀಂ ದರನು ಒದರಿದ ಕೂಡಲೆ ಹೋಗಿ, ಅವನು ಮಲಗಿಕೊಳ್ಳುವಂತೆ ಮಾಡು.

(ಲಕ್ಷ್ಮೀಂದರನು ಅವ್ವಾ, ಅವ್ವಾ ಎಂದು ಕೂಗುತ್ತ ಬರುವನು. ಚಂದನೆಯು ಹೋಗಿ ಅಡ್ಡಗಟ್ಟುವಳು)

**ಲಕ್ಷ್ಮೀಂದರ**— ಚಂದನೆ, ಅವ್ವನೆಲ್ಲಿರುವಳು ? ಈ ಅಪರಾತ್ರಿಯಲ್ಲಿ ನೀನೇಕೆ ಎಚ್ಚತ್ತಿರುವೆ ?

**ಚಂದನೆ**— ನಾನು ನಿಮ್ಮ ಸೇವಕಳು. ನೀವು ಗಾಢನಿದ್ರೆಯಲ್ಲಿ ತೊಡಗುವ ವರೆಗೆ ನನಗೆ ನಿದ್ದೆಗೆ ಅವಕಾಶ ದೊರೆಯದು.

**ಲಕ್ಷ್ಮೀಂದರ**— ಇರಲಿ, ಅವ್ವನೆಲ್ಲಿರುವಳು ? ಹೇಳು.

**ಚಂದನಾ**— ರಾಜ್ಞಿಯವರು ಶಿವಮಂದಿರದಲ್ಲಿರಬಹುದು. ಇಲ್ಲವೆ ತಮ್ಮ ಕೋಣೆಯಲ್ಲಿ ಚಿಂತಾಕ್ರಾಂತರಾಗಿ ಕುಳಿತಿರಬಹುದು. ನಿಮ್ಮ ಹಾಗೂ ಮಹಾರಾಜರ ಚಿಂತೆಯಿಂದ ಅವರಿಗೆ ನಿದ್ರೆಯೆ ಇಲ್ಲದಾಗಿದೆ.

**ಲಕ್ಷ್ಮೀಂದರ**— ನಾನು ಈಗಳೇ ಅವ್ವನನ್ನು ಕಾಣಬೇಕಾಗಿದೆ. ನಿಛನಿ ನಗರದಿಂದ ಇಬ್ಬರು ಅತಿಥಿಗಳು ಆಗಮಿಸಿರುವರಂತೆ. ಕಾವಲುಗಾರರು ಅವರನ್ನು ಅರಮನೆಯಲ್ಲಿ ಬಿಡಲೊಲ್ಲರಂತೆ. ಕಾರಣ ಅತಿಥಿಗಳು ರಾತ್ರಿಯನ್ನು ಕಳೆಯುವದಕ್ಕೆ ಧರ್ಮಶಾಲೆಗೆ ಹೋಗಿರುವರಂತೆ.

**ಚಂದನಾ**—ಯುವರಾಜರೆ, ಇಂದು ಅರಮನೆಯಲ್ಲಿ ಯಾರನ್ನೂ ಬಿಡುವಂತಿಲ್ಲ. ಪ್ರಸಿದ್ಧ ಕಳ್ಳನೊಬ್ಬನು ಮೋಸದಿಂದ ಅರಮನೆಯನ್ನು ಪ್ರವೇಶಿಸತಕ್ಕವನಿರುವನಂತೆ. ಕಾವಲುಗಾರರು ಪ್ರತೀಕಾರಕ್ಕೆ ಸಿದ್ಧರಾಗಿದ್ದಾರೆ. ಯಮನೂ ಕೂಡ ಇಂದಿನ ರಾತ್ರಿಯಲ್ಲಿ ಅರಮನೆಯನ್ನು ಹೋಗುವಂತಿಲ್ಲ !

**ಲಕ್ಷ್ಮೀಂದರ**— ಕಳ್ಳನು ಗುಪ್ತರೀತಿಯಿಂದ ಬರತಕ್ಕವನು. ಆದರೆ ನಿಛನಿನಗರದ ಅತಿಥಿಗಳು ಪ್ರಕಾಶರೀತಿಯಿಂದಲೆ ಬಂದಿದ್ದಾರೆ. ಇವರು ಕಳ್ಳರಲ್ಲ. ಇವರನ್ನು ಅರಮನೆಯಲ್ಲಿ ಏಕೆ ಬಿಡಲಾಗದು ? ಇವರು ಅತಿಥಿಗಳು. ಅತಿಥಿಗಳು ದೇವತಾಸ್ವರೂಪರು. ಇವರಿಗೆ ಅರಮನೆಯಲ್ಲಿ ಸ್ಥಳಕೊಡದೆ, ಧರ್ಮಶಾಲೆಗೆ ಹೋಗೆಂದು ಹೇಳುವುದು ಸರಿಯೇ ? ಅತಿಥಿಗಳನ್ನು ವಿಮುಖರನ್ನಾಗಿ ಮಾಡಿ ಕಳುಹುವದು ಧರ್ಮವೇ ? ಮೇಲಾಗಿ ಇವರು ಸಿಛನಿನಗರದವರು. ಬೀಹುಳೆಯ ಪಟ್ಟಣದವರು. ಯಾವ ಸುದ್ದಿಯನ್ನು ತಂದಿರುವರೊ ಏನೊ ! ಅವ್ವನೆಲ್ಲಿ? ಕರೆದುಕೊಂಡು ಬಾ. ಅವ್ವಾ—ಅವ್ವಾ— ( ಸನಕೆಯು ಧಾವಿಸಿ ಬರುವಳು. )

**ಸನಕೆ**— ಏಕಪ್ಪಾ ?

**ಲಕ್ಷ್ಮೀಂದರ**— ನೀನು ಯಾವಾಗಲೂ ಚಿಂತಾಗ್ರಸ್ತಳಾಗಿ ಕುಳಿತು ಕೊಳ್ಳುವೆ! ಹೀಗಾದರೆ, ಮನೆಯ ವ್ಯವಸ್ಥೆಯು ಹೇಗೆ ಸರಿಯಾಗಿ ಸಾಗಬೇಕು? ನಿಛಸಿನಗರದಿಂದ ಬಂದ ಇಬ್ಬರು ಅತಿಥಿಗಳು ಅರಮನೆಯಲ್ಲಿ ಸ್ಥಾನವನ್ನು ಹೊಂದದೆ, ವಿಮುಖರಾಗಿ ಹೋದರಂತೆ......

**ಸನಕೆ**— ಮಗು, ನಿನಗಿದರ ಚಿಂತೆಬೇಡ. ಅತಿಥಿಗಳನ್ನು ಆದರದಿಂದ ಕರೆತಂದು, ಅರಮನೆಯಲ್ಲಿರಿಸಿ ತಕ್ಕ ಉಪಚಾರವನ್ನು ಮಾಡಲಿಕ್ಕೆ ನಾನು ಸೇವಕ ರಿಗೆ ಆಜ್ಞಾಪಿಸಿರುವೆನು. ನೀನು ನಿಶ್ಚಿಂತನಾಗಿ ಹೋಗಿ ಮಲಗಿಕೊಳ್ಳು. ಅಪ ರಾತ್ರಿಯಲ್ಲಿ ನಿದ್ದೆಗೆಡುವದು ಪ್ರಕೃತಿಗೆ ಅಪಾಯಕರವು.

**ಲಕ್ಷ್ಮೀಂದರ**— ಅವ್ವಾ, ಕಣ್ಣಿಗೆ ನಿದ್ದೆಯೆ ಇಲ್ಲದಾಗಿದೆ! ಎಷ್ಟು ಹೊರಳಾಡಿದರೂ ನಿದ್ದೆಹತ್ತುವದಿಲ್ಲ! (ಗೇನಿಸಿ) ಅವ್ವಾ, ನನಗೊಂದು ವಸ್ತು ಬೇಕಾಗಿದೆ. ನೀನದನ್ನು ನನಗೆ ಕೊಟ್ಟರೆ, ನಾನು ಹೋಗಿ ಮಲಗಿ ಕೊಳ್ಳುವೆನು.

**ಸನಕೆ**— ಮಗು, ನಿನಗೇನುಬೇಕು ಹೇಳು, ಕೊಡುವೆನು.

**ಲಕ್ಷ್ಮೀಂದರ**— ಹಸ್ತಿದಂತದ ಕುಂಕುಮಕರಡಿಗೆಯು ಬೇಕು.

**ಸನಕೆ**— ಅದೇತಕ್ಕೆ ?

**ಲಕ್ಷ್ಮೀಂದರ**— ನಾನು ಕಣ್ಣುಮುಚ್ಚುತ್ತಲೆ, ಸಾಯುಸವದಾಗರನ ಕಿಶೋರವಯಸ್ಕಳಾದ ಕನ್ಯೆಯು-ಬೇಹುಳೆಯು-ನನ್ನೆದುರಿನಲ್ಲಿ ಬಂದು ನಿಂತಂ ತಾಗುವದು! ಹಸ್ತಿದಂತದ ಕುಂಕುಮ ಕರಂಡಕವನ್ನು ಆರ್ಜವ ವೃತ್ತಿಯಿಂದ ಯಾಚಿಸುತ್ತಿರುವವಳಂತೆ ಕಾಣುವಳು !

**ಸನಕೆ**—ಇದಾವ ದೊಡ್ಡ ಮಾತು ! ನಾನು ಈಗಳೆ ನಿನಗೆ ಅದನ್ನು ತರಿಸಿಕೊಡುವೆನು. ಸಾಯುಸವದಾಗರನು ವಚನಭಂಗ ಮಾಡಿದನು. ಇಲ್ಲ ವಾದರೆ, ನಾನೇ ಆ ಕುಂಕುಮ ಕರಡಿಗೆಯನ್ನು ಬೇಹುಳೆಗೆ ಕೊಡತಕ್ಕವಳಿ ದ್ದೆನು. ಆಗಲಿ, ನಿನ್ನಿಷ್ಟವಿದ್ದರೆ, ನೀನು ಆ ಕುಂಕುಮ ಕರಡಿಗೆಯನ್ನು ನಿಛಸಿ

ನಗರದ ಅತಿಥಿಗಳ ಮುಖಾಂತರ ಜೇಹುಳಿಗೆ ಮುಟ್ಟಿಸಬಹುದು. (ಚಂದನೆಗೆ ಇಂಗಿತ ಮಾಡುವಳು. ಚಂದನೆಯು ಕೂಡಲೆ ಕುಂಕುಮಕರಡಿಗೆಯನ್ನು ತಂದುಕೊಡುವಳು). ಮಗು, ತಕ್ಕೊ (ಕುಂಕುಮಕರಡಿಗೆಯನ್ನು ಕೊಡುವಳು) ನಿನ್ನ ಇಚ್ಛೆಯು ಪೂರ್ಣವಾಯಿತಷ್ಟೆ? ಇನ್ನು ಹೋಗು. ಮಲಗಿ ನಿದ್ರಿಸು. ಚಂದನೆ, ನಾನು ಹೋಗುವೆನು. ನೀನು ಯುವರಾಜನನ್ನು ಕರೆದೊಯ್ದು ಮಲಗಿಸಿ ಬಾ. (ಹೋಗುವಳು. ಚಂದನೆಯು ಯುವರಾಜನನ್ನು ಕರೆದುಕೊಂಡು ಹೋಗುವಳು).

## ಎರಡನೆಯ ಪ್ರವೇಶ

(ಪೂಜೆಯ ಕೋಣೆ. ಸನಕೆಯೂ ಗಾರುಡಿಗನ ವೇಷದಲ್ಲಿದ್ದ ಮನಸೆಯೂ ಇರುವರು.)

**ಮನಸಾ**—ರಾಣಿಯವರೆ, ನಿಮ್ಮ ಪೂಜೆಯಿಂದ ಮನಸಾದೇವಿಯು ಸಂತುಷ್ಟಳಾಗಿದ್ದರೆ, ಅವಳ ವಾಹನವಾದ ಶಂಖಚೂಡವೆಂಬ ಹಾವು ನೈವೇದ್ಯದ ಹಾಲನ್ನು ಸ್ವೀಕರಿಸಿರಲಿಕ್ಕೆ ಬೇಕು. ಹಾಲಿನ ಬಟ್ಟಲವು ಬರಿದಾಗಿದೆಯೆ ಹೇಗೆಂಬದನ್ನು ನೋಡಿರಿ.

**ಸನಕೆ**—(ನೋಡಿ) ಇಲ್ಲ. ಬಟ್ಟಲವಲ್ಲಿಯ ಹಾಲು ಮೊದಲಿದ್ದಷ್ಟೆ ಇದೆ! (ಸಣ್ಣ ಮೋರೆ ಮಾಡುವಳು).

**ಮನಸಾ**—ಶುಭಲಕ್ಷಣವಿದಲ್ಲ! ನಿಮ್ಮ ಪೂಜೆಯಿಂದ ದೇವಿಯು ಸಂತುಷ್ಟಳಾಗಿಲ್ಲ!

**ಸನಕೆ**—ನಾನಾವ ಕುಂದುಕೊರತೆಗಳನ್ನೂ ಆಚರಿಸಿದವಳಲ್ಲ! ಮನಸಾದೇವಿಯು ಏಕೆ ಪ್ರಸನ್ನಳಾಗಿರಲಿಕ್ಕಿಲ್ಲ?

**ಮನಸಾ**—ಈ ಮೊದಲು ನನ್ನೆದುರಿನಲ್ಲಿ ಹೀಗೆಂದೂ ಆಗಿದ್ದಿಲ್ಲ! ಇಂದು ಹೀಗೇಕಾಯಿತೊ ತಿಳಿಯದು!

**ಸನಕೆ**—ಇನ್ನು ಉಪಾಯವೇನು?

**ಮನಸಾ**—ಮನಸಾದೇವಿಯನ್ನು ಏಕಾಗ್ರಮನಸ್ಸಿನಿಂದ ಪ್ರಾರ್ಥಿಸಿಕೊಳ್ಳಿರಿ. ನಾನೂ ದೇವಿಯ ಪ್ರಸನ್ನತೆಗೆ ಯತ್ನಿಸುವೆನು. (ಸನಕೆಯು ಕೈಜೋಡಿಸಿ ಪ್ರಾರ್ಥನೆಮಾಡಹತ್ತುವಳು. ಗಾರುಡಿಗನು ಪುಂಗಿಯನ್ನೂದತೊಡಗುವನು.)

(ಬೇಹುಳಿಯು ಬರುವಳು.)

**ಬೇಹುಳಿ**—ಅವರೆಲ್ಲಿ? ನನಗೆ ಕುಂಕುಮಕರಡಿಗೆಯನ್ನು ಕೊಡುವೆನೆಂದು ಹೇಳಿದ ಅವರು ಈಗೆಲ್ಲಿರಬಹುದು? (ಕೋಣೆಯೊಳಗೆ ಹಣಿಕಿಹಾಕಿ ನೋಡುವಳು. ಅವರು ಇಲ್ಲಿಲ್ಲ.) (ಸಿಟ್ಟುಸಿರ ಬಿಡುವಳು. ಗಾರುಡಿಗನ ಪುಂಗಿಯ ಸ್ವರವನ್ನು ಕೇಳಿ ಒಳಹೋಗುವಳು. ಗಾಯನ ನರ್ತನಗಳನ್ನಾರಂಭಿಸುವಳು. ಸನಕೆಯು ವಿಸ್ಮಯಾತಿರೇಕದಿಂದ ನೋಡುತ್ತಿರುವಳು. ದೊಡ್ಡ ಹಾವು ಬಂದಿತು. ಬೇಹುಳೆಯು ಕುಣಿಯುತ್ತಲೆ ಹಾಲಿನ ಬಟ್ಟಲವನ್ನು ಹಾವಿನ ಮುಂದಿರಿಸಿದಳು. ಹಾವು ಹಾಲನ್ನು ಕುಡಿದಿತು. ಕ್ಷಣಕಾಲ ಆ ಕೋಣೆಯಲ್ಲಿ ಕತ್ತಲೆಯು ವ್ಯಾಪಿಸಿತು. ಬಳಿಕ ಮತ್ತೆ ಪ್ರಕಾಶವು ತೋರಿತು. ಗಾರುಡಿಗನಿರಲಿಲ್ಲ. ಹಾವೂ ಇದ್ದಿಲ್ಲ.)

**ಸನಕೆ**—(ವಿಸ್ಮಯಾತಿಶಯದಿಂದ) ದೇವಿ, ನೀನಾರು?

**ಬೇಹುಳಿ**—ನಾನು ಬೇಹುಳೆ.

**ಸನಕೆ**—ನಿಭನಿನಗರದರಸನಾದ ಸಾಯುಸವದಾಗರನ ಮಗಳೆ?

**ಬೇಹುಳಿ**—ಅಹುದು. ರಾಜಕನ್ಯೆಯಾಗಿದ್ದರೂ, ಇಂದು ಯಾಚಕಳಾಗಿ ಇಲ್ಲಿಗೆ ಬಂದಿರುವೆನು!

**ಸನಕೆ**—ಮಗು, ನಿನಗೇನು ಬೇಕಾಗಿದೆ?

**ಬೇಹುಳಿ**—ಹಸ್ತಿದಂತದ ಕುಂಕುಮ ಕರಂಡಕವು ಬೇಕಾಗಿದೆ. ನಾನು ಅವರನ್ನು ಬೇಡಿದೆನು. ಶಿವರಾತ್ರಿಯ ಉತ್ಸವಕ್ಕೆ ಚಂಪಕನಗರದ ಅರಮನೆಗೆ ಬಂದರೆ ಕೊಡುವೆನೆಂದು ಹೇಳಿದರು, ನಾನು ಅಪ್ಪನನ್ನು ಕರೆದುಕೊಂಡು ಬಂದಿರುವೆನು. ಅವರೆಲ್ಲಿ?

(ಲಕ್ಷೀಂದರನು ಕೋಣೆಯ ಬಳಿಗೆ ಬರುವನು).

**ಲಕ್ಷ್ಮೀಂದರ**— ಯಾರವರು ? ಕುಂಕುಮಕರಡಿಗೆಯನ್ನು ಬೇಡಿದವರಾರು ?

**ಬೇಹುಳಿ**— (ಕೋಣೆಯು ಹೊರಗೆ ಬಂದು) ಓಹೊ, ನೀವೇ ಅವರು ! ನೀವು ನಿಛನಿನಗರದಲ್ಲಿ ಹೇಳಿದಂತೆ, ಅಪ್ಪನ ಸಂಗಡ ಬಂದಿರುವೆನು. ಅಪ್ಪನು ಮಲಗಿದ್ದಾನೆ. ನನಗೆ ನಿದ್ದೆ ಹತ್ತಲಿಲ್ಲ. ನಿಮ್ಮನ್ನು ಹುಡುಕುತ್ತ ಬಂದೆನು ಎಲ್ಲಿ ? ನನ್ನ ಕುಂಕುಮಕರಡಿಗೆಯೆಲ್ಲಿ ? (ಲಕ್ಷ್ಮೀಂದರನು ಕೈಚಾಚಿ ಕುಂಕುಮಕರಡಿಗೆಯನ್ನು ಕೊಡಹೋಗುವನು. ಬೇಹುಳೆಯು ಆನಂದಾತಿರೇಕದಿಂದ). ನೀವಿದನ್ನು ನನಗೆ ಕೊಟ್ಟೆಬಿಡುವಿರಾ ?

**ಲಕ್ಷ್ಮೀಂದರ**— (ಕೈಯನ್ನು ಹಿಂದಕ್ಕೆ ತಕ್ಕೊಂಡು) ಪನ್ನಗವೇಣಿಯೆ, ನಾನಿದನ್ನು ನಿನಗೆ ಕೊಡಲಾರೆನು. ನಿನ್ನ ಕೂದಲುಗಳು ಕಪ್ಪಗೆ ಹೊಳೆಯುತ್ತಿವೆ. ರೇಶಿಮೆಯಂತೆ ಮೃದುವಾಗಿವೆ. ಮನೋಹರವಾಗಿವೆ. ಆದರೆ ನೀನು ಹಾವಿನಂತೆ ಹೆರಳಹಾಕಿಕೊಂಡಿರುವೆ ! ನಿನ್ನ ಹೆರಳನ್ನು ನೋಡಿದರೆ, ನನಗೆ ಹಾವಿನಂತೆ ಭಾಸವಾಗುತ್ತಿದೆ. (ಮುಂದೆ ಹೋಗ ಹತ್ತುವನು).

**ಬೇಹುಳಿ**— ಹೀಗೆ ಮಾಡಬೇಡಿರಿ ! ಕೊಡಿರಿ !

**ಲಕ್ಷ್ಮೀಂದರ**— (ಹೊರಳಿನಿಂತು) ಸುಂದರಿ, ನಿನ್ನ ಮುಖವನ್ನು ನೋಡಿದರೆ, ನನಗೆ ಕರುಣೆಯುಂಟಾಗುತ್ತಿದೆ ! ನೀನು ವಿನಯದಿಂದ ಯಾಚಿಸುತ್ತಿರಲು ಕೊಡಲೊಲ್ಲೆನೆಂದೆನ್ನಲಿಕ್ಕೆ ನನಗೆ ಅತಿಶಯ ವ್ಯಥೆಯಾಗುತ್ತಿದೆ ! ಆದರೂ ನಾನಿದನ್ನು ನಿನಗೆ ಕೊಡಲಾರೆನು ! (ಮತ್ತೆ ಮುಂದೆ ಹೋಗಹತ್ತುವನು. ಸನಕೆಯು ಬರುವಳು).

**ಸನಕೆ**— ಮಗು, ಮಗು,

**ಲಕ್ಷ್ಮೀಂದರ**— ಅವ್ವಾ, ನಾನು ಕೊಡುವದಿಲ್ಲ !

**ಬೇಹುಳಿ**— (ಸನಕೆಯನ್ನು ಗಟ್ಟಿಯಾಗಿ ಹಿಡಿದು) ನೀವಾದರೂ ಕೊಡಿಸಿರಿ !

**ಸನಕೆ—** ಮಗು, ಮುಂದೆಹೋಗಬೇಡ. ನನ್ನ ಮಾತನ್ನು ಕೇಳು. ಕುಂಕುಮಕರಡಿಗೆಯನ್ನು ಕೊಟ್ಟು ಹೋಗು.

**ಲಕ್ಷ್ಮೀಂದರ—** (ಮತ್ತೆ ತಿರುಗಿ ನಿಂತು) ಅವ್ವಾ, ಎಷ್ಟು ಮಾತ್ರಕ್ಕೂ ಕೊಡಲಾರೆನು ! ಚಾಂದಸವದಾಗರರ ಮಗನು ನಾನು. ಹಾವನ್ನೆ ಆಗಲಿ, ಹಾವಿ ನಂತಿರುವ ವಸ್ತುಗಳನ್ನೆ ಆಗಲಿ ಪ್ರೀತಿಸಲಾರೆನು ! ಈ ಪನ್ನಗವೇಣಿಗೆ ಕುಂಕುಮ ಕರಡಿಗೆಯನ್ನು ಕೊಡುವದು ಹೇಗೆ ? (ಮುಂದೆ ಹೋಗುವನು.)

**ಬೇಹುಳೆ—** ಯಾಚಕಳಾಗಿ ನಿಮ್ಮ ಮನೆಗೆ ಬಂದಿರುವೆನು ! ಒಲ್ಲೆ ನೆನ್ನದಿರ್ರಿ ! ಕೊಡಿರಿ !

**ಲಕ್ಷ್ಮೀಂದರ—** ಸುಂದರಿ, ನಿನ್ನ ಈ ದೀನಮುದ್ರೆಯನ್ನು ನೋಡಿ ನನಗೆ ಅತ್ಯಂತ ವ್ಯಥೆಯಾಗುತ್ತಿದೆ ! ನಿನ್ನನ್ನು ವಿಫಲಮನೋರಥಳನ್ನಾಗಿ ಮಾಡಿ ಕಳುಹಲಿಕ್ಕೆ ಮನಸ್ಸು ಹಿಂದೆಗೆಯುಹತ್ತಿದೆ ! ಆದರೂ ನಾನೀಗ ಮೋಹವನ್ನು ತ್ಯಜಿಸಬೇಕಾಗಿದೆ ! ನಿನ್ನ ಅಸಂತುಷ್ಟತೆಯನ್ನು ಲಕ್ಷಿಸದೆ, ನನ್ನ ನಿರ್ಧಾರವನ್ನು ಕೊನೆಗಾಣಿಸಬೇಕಾಗಿದೆ ! ಆದುದರಿಂದ ನಾನು ನಿನಗೆ ಕರಡಿಗೆಯನ್ನು ಕೊಡ ಲಾರೆನು ! (ಅಂತಸ್ತಿನ ಮೆಟ್ಟಲುಗಳನ್ನೇರಿ ಅದೃಶ್ಯನಾಗಿಹೋಗುವನು. ಬೇಹು ಳೆಯು ನಿರಾಶಳಾಗಿ ಕುಳಿತುಬಿಡುವಳು.)

**ಸನಕೆ—** (ಬೇಹುಳೆಯನ್ನುದ್ದೇಶಿಸಿ) ನೀನಿಲ್ಲಿಯೆ ಇರು. ಯಾವದೇ ರೀತಿಯಿಂದಾಗಲಿ, ನಾನು ಕುಂಕುಮಕರಡಿಗೆಯನ್ನು ತಂದು ನಿನಗೆ ಕೊಡು ವೆನು. (ಮಹಲಿನ ಪಾವಟಿಗೆಗಳನ್ನೇರಿ ಹೋಗುವಳು. ಬೇಹುಳೆಯು ವಿಷಾದ ದಿಂದ ಕುಳಿತಿರುವಳು. ಈ ಸಮಯದಲ್ಲಿ ಚಾಂದಸವದಾಗರನು ದೀನವೇಷದಿಂದ ಕಿಡಕಿಯ ಮಾರ್ಗವಾಗಿ ಒಳಗೆ ಬರುವನು. ಕಳ್ಳನಂತೆ ಸಾವಧಾನತೆಯಿಂದ ನಡೆದು ಮುಂದೆ ಹೋಗಿ, ಬೇಹುಳೆಯನ್ನು ನೋಡಿ ಚಮಕಿತನಾಗುವನು. ಕೆಲ ಹೊತ್ತಿನ ಮೇಲೆ ಬೇಹುಳೆಯು ಮುಂದೆ ಹೋಗಿ ನಿಲ್ಲುವನು. ಬೇಹುಳೆಯು ಗಾಬರಿಯಾಗೆ ಚೀತ್ಕಾರಮಾಡಿ ನೀವಾರು ಎಂದು ಕೇಳಿದಳು.)

**ಚಾಂದ—** ಒದರಬೇಡ. ಮೆಲ್ಲನೆ ಮಾತಾಡು. ನೀನಾರು ? ನನ್ನನ್ನು ಗುರುತಿಸಲಿಲ್ಲವೆ ?

**ಬೇಹುಳಿ—** ನಾನು ಈ ಸ್ಥಳದವಳಲ್ಲ. ಇಂದೇ ಇಲ್ಲಿಗೆ ಬಂದಿರುವೆನು.

**ಚಾಂದ—** ಶಿವರಾತ್ರಿಯ ಉತ್ಸವವನ್ನು ನೋಡಲಿಕ್ಕೆ ಬಂದಿರುವೆ ಯಾದೀತು! ಈಗಳೂ ಈ ಅರಮನೆಯಲ್ಲಿ ಮೊದಲಿನಂತೆ ಸಡಗರದಿಂದ ಶಿವರಾತ್ರಿಯ ಉತ್ಸವವಾಗುತ್ತಿದೆಯೆ? ಬಿಳಿಯ ಕಲ್ಲಿನ ಆ ಶಿವಮಂದಿರವು ಈಗಳೂ ತಲೆಯೆತ್ತಿಕೊಂಡಿದೆಯೆ? ಹೇಳು! ಬೇಗ ಹೇಳು!

**ಬೇಹುಳಿ—** ನನಗೇನೂ ಗೊತ್ತಿಲ್ಲ. ನಾನಾವುದನ್ನೂ ನೋಡಿದವಳಲ್ಲ.

**ಚಾಂದ—** ನನ್ನ ಆ ಶಿವಮಂದಿರವನ್ನು ನೋಡಿಲ್ಲವೆ? ಹರ-ಪಾರ್ವತಿಯರ ಪ್ರತಿಮೆಗಳನ್ನು ನೋಡಿಲ್ಲವೆ? ನೋಡದಿದ್ದರೆ, ಮತ್ತೇನು ನೋಡಿರುವೆ? ಗಜಶಾಲೆಯನ್ನು ನೋಡಿರುವೆಯಾ? ಅಶ್ವಶಾಲೆಯನ್ನು ನೋಡಿರುವೆಯಾ? ಕನ್ನಡಿಯ ಮಹಲನ್ನು ನೋಡಿರುವೆಯಾ? ಈ ಅರಮನೆಯೊಳಗಿನ ಕನ್ನಡಿಯ ಮಹಲು ಬಹು ಪ್ರೇಕ್ಷಣೀಯವಾದ್ದು. ದೂರದ ಜನರು ಸಹ ನೋಡಲಿಕ್ಕೆ ಹಿಂಡುಗಟ್ಟಿಕೊಂಡು ಬರುತ್ತಿದ್ದರು.

**ಬೇಹುಳಿ—** ನೀವು ಹೇಳಿದವುಗಳಲ್ಲಿ ನಾನೊಂದನ್ನೂ ಕಂಡವಳಲ್ಲ. ನಾನು ನವಿಲನ್ನು ನೋಡಿದ್ದೇನೆ. ಹಸ್ತಿದಂತದ ಕುಂಕುಮಕರಡಿಗೆಯನ್ನು ಕಂಡಿದ್ದೇನೆ. ಮತ್ತೇನನ್ನು ನೋಡಿದವಳಲ್ಲ.

**ಚಾಂದ—** ರಾಣಿಯನ್ನು ನೋಡಿರುಯಾ? ಅವಳ ಮಗನನ್ನು? ಅಥವಾ ಮಗಳನ್ನು?

**ಬೇಹುಳಿ—** ನೀವು ಯಾರೆಂಬುದನ್ನು ಮೊದಲು ನನಗೆ ಹೇಳಿರಿ.

**ಚಾಂದ** - ನನ್ನನ್ನು ಗುರುತಿಸದಿದ್ದ ನೀನಾರೆಂಬುದು ನನಗೆ ತಿಳಿಯದಾಗಿದೆ! ಇರಲಿ, ನಾನಾರೆಂಬುದನ್ನು ಮೊದಲು ಹೇಳಲಿಯಾ? ನಾನು-ನಾನು-

**ಬೇಹುಳಿ—**ನಾನಿನ್ನೂ ಹುಡುಗೆ. ನಿಮ್ಮ ಗುರುತು ನನಗೆ ಹೇಗೆ ಹತ್ತಬೇಕು? ಮುದುಕರಾಗಿರುವಿರಿ. ನಿಮ್ಮನ್ನು ನಾನು ಹಿಂದೆ ಎಂದೂ ನೋಡಿದವಳಲ್ಲ.

**ಚಾಂದ**— ನಾನು- ನಾನು- ( ಅತ್ತಿತ್ತ ನೋಡಹತ್ತುವನು.)

**ಬೇಹುಳಿ**— ನೀವಾರೆಂಬುದು ನನಗೆ ಹೊಳೆಯಿತು ! ನೀವು ಕಳ್ಳರು ! ಕಳವಿಗೋಸ್ಕರ ಬಂದಿರುವಿರಿ ! ನಿಲ್ಲಿರಿ, ನಾನು ಜನರನ್ನು ಕೂಗಿ ನಿಮಗೆ ಪ್ರಾಯಶ್ಚಿತ್ತವನ್ನುಂಟುಮಾಡುವೆನು ! ಯಾರಿರುವಿರಿ ! ಬೇಗಬನ್ನಿರಿ ! ಕಳ್ಳನು ಬಂದಿದ್ದಾನೆ ! ( ಚೀತ್ಕಾರ ಮಾಡುತ್ತ ಓಡಹತ್ತುವಳು. ಚಾಂದನು ಅವಳನ್ನು ಹಿಡಿಯುವನು. )

**ಚಾಂದ** — ಈಗ ನೀನೆಲ್ಲಿಗೆ ಹೋಗುತ್ತಿದ್ದೆ ?

**ಬೇಹುಳಿ**— ರಾಣಿಯ ಹತ್ತಿರ.

**ಚಾಂದ**— ಏತಕ್ಕಾಗಿ ?

**ಬೇಹುಳಿ**— ಕಳ್ಳನು ಬಂದಿರುವನೆಂದು ಹೇಳಲಿಕ್ಕೆ.

**ಚಾಂದ**— ಕಳ್ಳನ ಹೆಸರನ್ನು ಕೇಳಿಕೊಳ್ಳದಲೆ ಹೋಗುವೆಯಾ ?

**ಬೇಹುಳಿ**— ಕಳ್ಳನು ಸಹಜವಾಗಿ ತನ್ನ ಹೆಸರನ್ನು ಹೇಳುವನೆ ?

**ಚಾಂದ**— ಹೇಳದೇನು ? ಹೇಳುವೆನು, ಕೇಳು. ( ಬೇಹುಳಿಯ ಕಿವಿಯಲ್ಲಿ ಮೆಲ್ಲನೆ ಹೇಳುವನು. ) ಇನ್ನು ನೀನು ಹೋಗಬಹುದು. ನಾನು ನಿನ್ನ ದಾರಿಯ ಕಾಯುತ್ತ ಇಲ್ಲಿಯೇ ನಿಂತಿರುವೆನು.

**ಬೇಹುಳಿ**— ನೀವು ಚಾಂದ ಸವದಾಗರರೆ ? ಒಳ್ಳೇ ಆನಂದದ ಸಂಗತಿಯು! (ಚಪ್ಪಾಳೆ ಬಾರಿಸಿ ಮುಂದೆ ಹೋಗುವಳು. ಮತ್ತೆ ಹಿಂದಿರುಗಿ ಬಂದು) ನಿಜವಾಗಿಯೂ ನೀವು ಚಾಂದಸವದಾಗರರೆ ?

**ಚಾಂದ** — ನಿಜವಾಗಿಯೂ ಅಹುದು. ( ಬೇಹುಳಿಯು ಮೇಲೆ ಹೋಗುವಳು.) ಈ ಬಾಲೆ ಯಾರಿರಬಹುದು ? ಇವಳು ನನ್ನ ಮಗಳಾಗಿರಬಹುದೆ ? ಸಂಭವನೀಯವಲ್ಲ! ಇಪ್ಪತ್ತು ವರ್ಷಗಳ ಹಿಂದಿನ ಮಾತು ! ಇವಳು ಇಪ್ಪತ್ತು ವರ್ಷ ವಯಸ್ಸಿನವಳಲ್ಲ ! ಅಂದಮೇಲೆ ಇವಳಾರು ? ಸೊಸೆಯಾಗಿರಬಹುದೆ ? ( ಮೂವರು ಶಿಪಾಯಿಗಳು ಮೆಲ್ಲ ಮೆಲ್ಲನೆ ಬರುವರು. ಚಾಂದಸವದಾಗರನ

ಬಳಿಗೆ ಹೋಗುವರು. ಖಡ್ಗವನ್ನೆತ್ತುವರು. ಇವರ ಹಿಂದೆ ದುರ್ಯೋಧನ ನಿಲುವನು. )

**ದುರ್ಯೋಧನ**— ಹೊಡೆಯಿರಿ— (ಚಾಂದನು ತಿರುಗಿ ನಿಂತು ನೋಡುವನು. ಶಿಪಾಯರು ವಿಸ್ಮಯದಿಂದ ನೋಡುವರು. )

**ಚಾಂದ**— ಇದೇನು ? ಹೀಗೇಕೆ ಮಾಡುವಿರಿ ?

**ದುರ್ಯೋಧನ**— ತುಡುಗನೆ, ನಿನ್ನ ಸಾಹಸಕ್ಕೆ ಮೇರೆಯಿಲ್ಲದಾಗಿದೆ! ನಿಲ್ಲು, ಬೇಗನೆ ನಿನ್ನ ಈ ತಲೆತಿರುಕ ಸಾಹಸದ ಪ್ರತಿಫಲವನ್ನನುಭವಿಸು! ( ಶಿಪಾಯಿಗಳನ್ನುದ್ದೇಶಿಸಿ) ಏಕೆ ಸುಮ್ಮನೆ ನಿಂತಿರಿ ? ಖಡ್ಗವನ್ನುಪಯೋಗಿಸಿರಿ ! ಬೇಗನೆ ಹೊಡಿಯಿರಿ ! ಅನುಮಾನಮಾಡದೆ, ಕಳ್ಳನನ್ನು ಕೊಲ್ಲಿರಿ ! ( ಶಿಪಾಯಿಗಳು ಮತ್ತೆ ಖಡ್ಗವೆತ್ತುವರು. )

**ಚಾಂದ**:— ಅವಿಚಾರಕ್ಕೊಳಗಾಗಬೇಡಿರಿ ! ನಿಲ್ಲಿರಿ ! ನಾನಾರೆಂಬುದನ್ನು ಬಲ್ಲಿರಾ ?

**ದುರ್ಯೋಧನ**:— ನೀನು ಕಳ್ಳನೆಂಬುದು ನಮಗೆ ಗೊತ್ತುಂಟು ! ನಿನ್ನ ಇತರ ಪರಿಚಯವು ನಮಗೆ ಬೇಡ ! ನೀನು ಕಳ್ಳನಾಗಿರುವೆಯೆಂಬೊಂದೇ ಕಾರಣದಿಂದ ವಂಡಾರ್ಹನಾಗಿರುವೆ……

**ಚಾಂದ**:— ನಾನು ಕಳ್ಳನೆ ? ನನ್ನ ಮನೆಯಲ್ಲಿ ನಾನು ಕಳ್ಳನೆ ? ನೀವು ಈ ವೇಷದಲ್ಲಿರುವ ನನ್ನನ್ನು ಗುರುತಿಸದಿರಬಹುದು. ಆದರೆ ನನ್ನ ನಾಮವು ನಿಮಗೆ ಅಪರಿಚಿತವಾದ್ದಲ್ಲ. ಕೇಳಿಕೊಳ್ಳಿರಿ……

**ದುರ್ಯೋಧನ**:— ಕಳ್ಳನಿಗೆ ತುಡುಗ, ಚೋರ, ತಸ್ಕರ ಎಂದು ಹಲವು ಹೆಸರುಗಳಿರಬಹುದು. ಆದರೆ ಕೋಶದ ಆ ಹೆಸರುಗಳನ್ನು ಕೇಳಿಕೊಳ್ಳುವದರಿಂದ ನಮಗೆ ಪ್ರಯೋಜನವಿಲ್ಲ ! ( ಸಿಪಾಯಿಗಳನ್ನು ಕುರಿತು ) ಅನುಮಾನಿಸಬೇಡಿರಿ, ತಡಮಾಡಬೇಡಿರಿ. ಈಗಳೇ ಇವನನ್ನು ಸಂಹರಿಸಿ ಬಿಡಿರಿ ! ( ಶಿಪಾಯಿಗಳು ಮತ್ತೆ ಕತ್ತಿಯನ್ನೆತ್ತುವರು. ಜೇಹುಳೆಯು ಮೆಟ್ಟಿಲನ್ನಿಳಿದು ಬರುವಳು. )

**ಬೇಹುಳಿ:**— ಹೊಡೆಯಬೇಡಿರಿ ! ಖಡ್ಗಗಳನ್ನು ಒರೆಗಾಣಿಸಿರಿ. ಇವರು ಚಾಂದಸವದಾಗರರು.

**ದುರ್ಯೋಧನ:**— ಚಾಂದಸವದಾಗರರೆ? ನಮ್ಮ ಮಹಾಪ್ರಭುಗಳೆ ?

**ಬೇಹುಳಿ:**— ಅಹುದು. ಅದೊ, ಅಲ್ಲಿ ನೋಡಿರಿ. ರಾಣಿಯು ಇಳಿದು ಬರುತ್ತಿರುವಳು. ( ಸನಕೆಯು ಭರದಿಂದ ಬರುವಳು. ಹಿಂದೆ ಲಕ್ಷ್ಮೀಂದರನಿರುವನು. )

**ಸನಕೆ:**— ಪ್ರಾಣನಾಥ, ಇದೇನು ? ಈ ವೇಷದಲ್ಲಿ ಈ ಅಪರಾತ್ರಿಯಲ್ಲಿ ಕಿಡಕಿಯ ಮಾರ್ಗವಾಗಿ ತಮ್ಮ ಆಗಮನವು ? ಏನೆ ಆಗಲಿ, ದೇವರ ದಯವಿತ್ತೆನ್ನಬೇಕು ! ಇಲ್ಲದಿದ್ದರೆ, ಜ್ಯೋತಿಷಿಯ ಮಾತಿನಿಂದ ಮೋಸಹೋದ ನನ್ನ ಕೃತಿಯಿಂದ ಇಂದು ಈ ಅರಮನೆಯಲ್ಲಿ ಮಹಾನರ್ಥವು ಘಟಿಸುತ್ತಿತ್ತು ! ಜಗದಂಬೆ, ( ಕೈಜೋಡಿಸಿ ) ಹೀಗೆಯೆ ಎಂದೆಂದಿಗೂ ಕೃಪಾವಶಳಾಗಿರು ! ಆರ್ಯಪುತ್ರರನ್ನು ದೀರ್ಘಜೀವಿಗಳನ್ನಾಗಿ ಮಾಡು !

**ದುರ್ಯೋಧನ:**— ( ಬೇಹುಳಿಯ ಬಳಿಯಲ್ಲಿ ಮೊಂಡೆಗಾಲ ಹಚ್ಚಿ ಕುಳಿತು ) ಅಮ್ಮಾ, ನೀನಾರು ? ಮಾನವಿಯಲ್ಲ— ಸಾಕ್ಷಾದ್ದೇವಿಯು ! ಅಂತೆಯೆ ಪ್ರಭುಹತ್ಯೆಯ ಮಹಾಪಾತಕದಿಂದ ನನ್ನನ್ನು ಮುಕ್ತನನ್ನಾಗಿ ಮಾಡಿದೆ ! ನೀನು ಒಂದರಕ್ಷಣ ವಿಳಂಬ ಮಾಡಿದ್ದರೆ, ನಾನು ಸ್ವಾಮಿಹತ್ಯೆಯನ್ನು ಮಾಡಿಸಿ, ಘೋರ ಪಾತಕಕ್ಕೆ ಗುರಿಯಾಗುತ್ತಿದ್ದೆನು !

**ಸನಕೆ:**— ಪ್ರಾಣನಾಥ, ವಂಚಕನಾದ ಜ್ಯೋತಿಷಿಯೊಬ್ಬನು ಇಂದಿನ ರಾತ್ರಿಯಲ್ಲಿ ಅರಮನೆಯಲ್ಲಿ ಕಳ್ಳನು ಬರುವನೆಂದು ಭವಿಷ್ಯ ಹೇಳಿದ್ದನು. ನಾನು ಅವನ ಮಾತನ್ನು ನಂಬಿ ಕಾವಲಿರಿಸಿದ್ದೆನು. ನೀವು ಕಳ್ಳರೆಂದೇ ಭಾವಿಸಿ, ಈ ಸೈನಿಕರು ನಿಮ್ಮನ್ನು ಕೊಲ್ಲಲಿಕ್ಕೆ ಸಿದ್ಧರಾಗಿರಬಹುದು. ಇರಲಿ, ಈ ಅಪರಾತ್ರಿ ಹೀಗೇಕೆ ಬರೋಣವಾಯಿತು ?

**ಚಾಂದ:**— ನಾನು ಬರಲಿಕ್ಕೆ ಮನಸ್ಸು ಮಾಡಿದವನಲ್ಲ ! ಬಂದವನಲ್ಲ ! ನಿಯತಿಯು ನನ್ನನ್ನು ಎಳೆದು ತಂದಿದೆ ! ದುರ್ದಾಂತ ಶಕ್ತಿಸಂಪನ್ನವಾದ ಅದು ನನ್ನ ಇಚ್ಛೆಯ ವಿರುದ್ಧವಾಗಿ ಬಲಾತ್ಕಾರದಿಂದ ನನ್ನನ್ನಿಲ್ಲಿಗೆ ಬರಮಾಡಿಕೊಂಡಿದೆ !

ಮಧುಕರ ಹಡಗವನ್ನೇರಿ ಬಂದವನಲ್ಲ ! ರಾಜಮಾರ್ಗದಿಂದ ನಡೆದು ಬಂದವನಲ್ಲ ! ಸಿಂಹದ್ವಾರದಿಂದ ಒಳಹೊಕ್ಕವನಲ್ಲ ! ಕಿಡಕಿಯ ದಾರಿಯಿಂದ ಈ ದೀನ ವೇಷದಿಂದ ಬರಬೇಕಾಯಿತು ! ಹಗಲು ಹೊತ್ತಿನಲ್ಲಿ ಬರಲಿಕ್ಕೆ ನನಗೆ ಮರ್ಯಾದೆ ಸಾಲಲಿಲ್ಲ ! ಕಾರಣ ಈ ಅಪರಾತ್ರಿಯಲ್ಲಿ ಕಳ್ಳನಂತೆ ಬರಬೇಕಾಯಿತು !

**ಸನಕೆ:—** ಅಯ್ಯೋ, ಹೀಗೆ ಕಷ್ಟವನ್ನನುಭವಿಸಬೇಕಾಯಿತೆ ? ದೈವ ದುರ್ವಿಪಾಕವಲ್ಲವೆ ಮತ್ತೇನು ? ( ಕಣ್ಣೀರುಮರಿಸುವಳು. ತುಸುಹೊತ್ತಿನ ಮೇಲೆ ಕೊಂಚ ಶಾಂತಳಾಗಿ ಕೈಜೋಡಿಸಿ ) ಜಗದಂಬೆ, ಆರ್ಯಪುತ್ರರ ಸಕಲ ಸಂಕಟಗಳನ್ನು ಪರಿಹರಿಸು. ಇವರು ಚಿರಸುಖಿಗಳಾಗುವಂತೆ ಅನುಗ್ರಹಿಸು. ( ಕ್ಷಣಕಾಲ ಸುಮ್ಮನಿದ್ದು ಮತ್ತೆ ) ಆರ್ಯಪುತ್ರರೆ, ಈಗ ಮಧುಕರ ಹಡಗವೆಲ್ಲಿ ? ಎಲ್ಲಿ ಬಿಟ್ಟುಬಂದಿರುವಿರಿ ?

**ಚಾಂದ:—** ನಾನು ಬಿಟ್ಟು ಬಂದವನಲ್ಲ ! ತಾನೇ ತಾನಾಗಿ ಹೋಗಿದೆ ! ತುಂಬಿದ್ದ ಮುತ್ತುರತ್ನಾದಿಗಳೊಡನೆ. ಆಳವಾದ ನೀರಿನಲ್ಲಿ ಚಿರವಾಸ್ತವ್ಯವನ್ನು ಮಾಡಿಕೊಂಡಿದೆ ! ಒಳ್ಳೆ ಸುರಕ್ಷಿತವಾಗಿದೆ ! ಇನ್ನು ಅದಕ್ಕೆ ಬಿರುಗಾಳಿಯ ಭಯವಿಲ್ಲ ! ಬಂಡೆಗಲ್ಲುಗಳ ಹಾವಳಿಯಿಲ್ಲ ! ತುಡುಗರ ಹೆದರಿಕೆಯಿಲ್ಲ !

**ಸನಕೆ:—** ನಿಮ್ಮ ಪ್ರೀತಿಯ ಹಡಗವದು !

**ಚಾಂದ:—** ಕಳೆದುಕೊಂಡೆನು— ಎಲ್ಲವನ್ನೂ ಕಳೆದುಕೊಂಡು ಬರಿಗೈಯಿಂದ ಬಂದಿರುವೆನು !

**ಸನಕೆ:—** ಅದಕ್ಕಾಗಿ ಚಿಂತಿಸಬೇಡಿರಿ. ಅಂತಹ ಹಲವು ಹಡಗುಗಳನ್ನು ಸಂಪಾದಿಸಬಹುದು ! ಎಷ್ಟೋ ಪಟ್ಟು ಮುತ್ತುರತ್ನಾದಿಗಳನ್ನು ಸಂಗ್ರಹಿಸಬಹುದು ! ಕೈಬಿಟ್ಟು ಹೋದ ವಸ್ತುಗಳಿಗಾಗಿ ಮಿಡುಕಿ ಉಪಯೋಗವಿಲ್ಲ ! ನೀವು ಕಳೆದುಕೊಂಡಿರುವ ವಸ್ತುಗಳಿಗಿಂತ ಹೆಚ್ಚಿನ ಒಡವೆಯೊಂದನ್ನು ಪಡೆದು ಸಂರಕ್ಷಿಸಿಟ್ಟಿರುವೆನು. ನೀವಿವನನ್ನು ನೋಡಿ ದುಃಖವನ್ನು ಮರೆತು ಬಿಡಿರಿ. ( ಲಕ್ಷ್ಮೀಂದರನನ್ನು ತೋರುವಳು ) ನಮ್ಮೀರ್ವರ ದಾಂಪತ್ಯಜೀವನದ ಸಫಲತೆಯನ್ನು ಮನದಂದು ಸಂತುಷ್ಟರಾಗಿರಿ. ( ಲಕ್ಷ್ಮೀಂದರನನ್ನುದ್ದೇಶಿಸಿ ) ಮಗು, ಇವರು ನಿನ್ನ......( ಲಕ್ಷ್ಮೀಂದರನು ತಂದೆಯ ಪಾದಗಳಿಗೆರಗುವನು. ಚಾಂದನು

ಮಗನನ್ನು ಎಬ್ಬಿಸಿ ಸ್ನೇಹಭರದಿಂದ ಆಲಂಗಿಸುವನು. ಕೆಲ ಹೊತ್ತಿನ ಮೇಲೆ ಭಿನ್ನ ವಿಚಾರಕ್ಕೊಳಗಾಗಿ ಮಗನಿಂದ ಸರಿದು ನಿಲ್ಲುವನು.)

**ಚಾಂದ**:— ವತ್ಸ, ಏನೆಂದು ಆಶೀರ್ವದಿಸಲಿ ? ಮುಖ್ಯವಾಗಿ ಶಿವ ಭಕ್ತನಾಗು ! ನೀನು ದೀರ್ಘಜೀವಿಯಾಗಬೇಕೆಂಬುದು ನನ್ನ ಸಹಜವಾದ ಆಶೆ ಯಾಗಿದೆ. ಆದರೆ ಶ್ರೀಸಾಂಬನ ಇಚ್ಛೆಯು ಹೇಗಿದೆಯೋ ಏನೊ ! ಅವನು ನಮ್ಮೆಲ್ಲರ ಮೇಲೆ ಸಂತುಷ್ಟನಾಗಿದ್ದರೆ, ನೀನು ನಿಶ್ಚಯವಾಗಿಯೂ ದೀರ್ಘ ಜೀವಿಯಾಗುವೆ !

**ಸನಕೆ**:— ಪ್ರಾಣನಾಥ, ನೀವು ದುರ್ಭಾವನೆಗಳಿಗೊಳಗಾಗಬೇಡಿರಿ. ಇಲ್ಲದ-ಸಲ್ಲದ ವಿಚಾರಗಳನ್ನು ಮನಸ್ಸಿನಲ್ಲಿ ತಂದು ಕೊರಗಬೇಡಿರಿ. ನಮ್ಮ ಈ ಮಗನು ಶತಾಯುಷಿಯಾಗುವನೆಂಬವದಲ್ಲಿ ಸಂದೇಹವಿಲ್ಲ. ಯಾಕೆಂದರೆ, ನಾನು ಇವನ ದೀರ್ಘಜೀವನಕ್ಕಾಗಿ ವ್ರತ-ಉಪವಾಸಗಳನ್ನೂ, ಪೂಜೆಪುರಸ್ಕಾರ ಗಳನ್ನೂ ಆಚರಿಸಿ, ದೇವರ ಅನುಗ್ರಹವನ್ನು ಸಂಪಾದಿಸಿದ್ದೇನೆ.

**ಲಕ್ಷ್ಮೀಂದರ**:— (ಹತ್ತಿರಿದ್ದ ಕರಡಿಗೆಯನ್ನು ಹೊರದೆಗೆದು) ಬೇಹುಳೆ, ಇನ್ನು ನೀನು ಇದನ್ನು ಗ್ರಹಿಸಬಹುದು. ( ಕೊಡಹೋಗುವನು. )

**ಬೇಹುಳೆ**:— ( ಅಭಿಮಾನದಿಂದ ) ನನಗೆ ಬೇಕಾಗಿಲ್ಲ ! ನಾನೊಲ್ಲೆನು !

**ಲಕ್ಷ್ಮೀಂದರ**:— ಮಾನಿನಿ, ಕೋಪಗೊಳ್ಳದಿರು. ಬೇಡಿದ ಕೂಡಲೆ ಕೊಡಲಿಲ್ಲವೆಂಬ ಅಭಿಮಾನಕ್ಕೊಳಗಾಗಬೇಡ. ಇಂದಿನ ಈ ಸಂತೋಷ ಪ್ರಸಂ ಗದ ಶ್ರೇಯಸ್ಸೆಲ್ಲವೂ ನಿನ್ನದು ! ನಿನ್ನ ಉಪಕಾರವನ್ನು ನಾನು ಬಾಯಿಯಿಂದ ವ್ಯಕ್ತಮಾಡಲಸಮರ್ಥನಾಗಿರುವೆನು. ಇನ್ನು ನಿನಗೆ ಅದೇಯವಾದ್ದಾವುದೂ ನನ್ನಲ್ಲಿಲ್ಲರದು ! ನಾನು ಸರ್ವಸ್ವಿ ನಿನ್ನವನು ! ( ಬೇಹುಳೆಯು ನಕ್ಕು ಕೈ ಚಾಚುವಳು.)

**ಸನಕೆ**:— ಮಗು, ಆತ್ಮಸಮರ್ಪಣ ಮಾಡಿದ ನೀನು ಇವಳಿಗೆ **ಕುಂಕುಮಕರಡಿಗೆಯನ್ನು** ಸಮರ್ಪಿಸುವ ವಿಧಾನವು ಹೀಗಲ್ಲ. ನಿಲ್ಲು, ನಾನು **ಹೇಳಿಕೊಡುವೆನು** ( ಕರಡಿಗೆಯ ಬಾಯಿಯನ್ನು ತೆರೆಯುವಳು. ಇವಳ

ಇಂಗಿತದಂತೆ ಲಕ್ಷ್ಮೀಂದರನು ಬೇಹುಳೆಯ ಹಣೆಯಲ್ಲಿ ಚಂದಿರಬಟ್ಟನ್ನಿಡುವನು. ಬಳಿಕ ಕರಡಿಗೆಯ ಬಾಯಿಯನ್ನು ಮುಚ್ಚಿ ಬೇಹುಳೆಗೆ ಕೊಡುವನು.)

**ಚಾಂದ:**— ( ಕೈಹಿಡಿದು ) ಲಕ್ಷ್ಮೀರೂಪಿಣಿಯೇ, ನೀ ನಾ ರು ? ( ಬೇಹುಳೆಯು ಸುಮ್ಮನಿರುವಳು. ಸಾಯುಸವದಾಗರನು ಪ್ರವೇಶಿಸುವನು. )

**ಸಾಯು:**— ಪ್ರಿಯಮಿತ್ರನೆ, ಇವಳು ನನ್ನ ಮಗಳು. ನಾವೀರ್ವರೂ ಜಲಪ್ರವಾಸದಲ್ಲಿರುವಾಗ ನಾನು ನಿನ್ನ ಮಗನಿಗೆ ನನ್ನ ಮಗಳನ್ನು ಕೊಟ್ಟು ಲಗ್ನ ಮಾಡುವೆನೆಂದು ವಚನ ಕೊಟ್ಟಿದ್ದೆನಷ್ಟೆ ? ಆದರೆ ನಾನು ಪ್ರವಾಸದಿಂದ ತಿರುಗಿ ಮನೆಗೆ ಹೋದ ಬಳಿಕ ನಡೆದ ದುರ್ಘಟನೆಗಳಿಂದ ವಿಚಲಿತನಾಗಿ, ವಚನಭಂಗಮಾಡಲಿಕ್ಕೆ ಸಿದ್ಧನಾಗಿದ್ದೆನು. ಇದರಿಂದ ನನಗೆ ಸಮಾಧಾನವಾಗ ಲಿಲ್ಲ. ವಚನಭಂಗದ ದೋಷವನ್ನು ಹೊರಬೇಡವೆಂದು ಮನಸ್ಸು ಬೋಧಿಸ ಹತ್ತಿತು. ಮೇಲಾಗಿ ರಾತ್ರಿಯಲ್ಲಿ ಒಂದು ವಿಚಿತ್ರ ಕನಸ ಕಂಡೆನು. ಈ ಕಾರಣ ಗಳ ಮೂಲಕ ನಾನು ವಚನಪಾಲನೆ ಮಾಡಿಯೆ ತೀರಬೇಕೆಂದು ನಿರ್ಧರಿಸಿ ಕೊಂಡೆನು. ಮಗಳನ್ನು ಕರೆದುಕೊಂಡು ಇಲ್ಲಿಗೆ ಬಂದೆನು. ನಾನು ಬಂದಾಗ್ಗೆ ನೀನು ಇಲ್ಲಿರಲಿಲ್ಲ. ಸೇವಕನೊಬ್ಬನು ಇದೇ ಈಗ ನೀನು ಪ್ರವಾಸದಿಂದ ಮರಳಿ ಬಂದ ಸುದ್ದಿಯನ್ನು ನನಗೆ ತಿಳಿಸಿದನು. ನಾನು ನಿನ್ನ ದರ್ಶನಕ್ಕಾಗಿ ಧಾವಿಸಿ ಬಂದೆನು. ಎಲ್ಲವೂ ಕುಶಲವಷ್ಟೆ ?

**ಚಾಂದ:**— ಮಿತ್ರನೆ, ಎಲ್ಲವೂ ಕುಶಲವೇ ಸರಿ ! ಇಂದಿನ ಈ ವೇಳೆಯು ನನ್ನ ಜೀವನದ ಸಂತೋಷದ ಸುಮುಹೂರ್ತಗಳಲ್ಲೊಂದಾಗಿದೆ ! ನನ್ನ ಆಯು ಷ್ಯದ ಈ ಮಹತ್ವದ ಮುಹೂರ್ತದಲ್ಲಿ ಪುತ್ರನ ಹಾಗು ಸೊಸೆಯ ಮುದ್ದು ಮುಖಗಳನ್ನು ನೋಡಿ ನನಗೆ ಅತಿಶಯ ಆನಂದವಾಗಿದೆ. ಬಾಲಮಿತ್ರನಾದ ನಿನ್ನ ಪುನರ್ದರ್ಶನದಿಂದ ನನಗೆ ಪರಮಹರುಷವಾಗಿದೆ. ( ಮೇಲಕ್ಕೆ ಮೋರೆ ಮಾಡಿ ) ಪರಮೇಶ್ವರನೆ, ನಿನ್ನ ಲೀಲೆಯು ಅಗಾಧವಾದದ್ದು. ಪಾಮರನಾದ ನಾನು ನಿನ್ನ ಅತರ್ಕ್ಯ ಲೀಲೆಯ ರಹಸ್ಯವನ್ನರಿಯುವದೆಂತು ? ಜಯ ಶಂಭೊ ! ಜಯ ಶಂಕರ ! ಹರ ಹರ ಮಹಾದೇವ ! ( ನೀಲನು ಧಾವಿಸಿ ಬರುವನು.)

ನೀಲ:— ಮಹಾಪ್ರಭುಗಳೆ, ಬಂದಿರುವಿರಾ ? ಸುಖರೂಪವಾಗಿರು ವಿರಾ ? ( ಪ್ರಭುವಿನ ಪಾದಗಳ ಮೇಲೆ ಬೀಳುತನು. ಚಾಂವನು ತನ್ನ ವಿಶ್ವಾಸುಕ ಸೇವಕನನ್ನು ಎಬ್ಬಿಸಿ ಆಲಂಗಿಸುವನು. )

## ಎರಡನೆಯ ಪ್ರವೇಶ

ನಿಭನಿ ನಗರದ ಅರಮನೆ. ಸಾಯುಸವದಾಗರನೂ ಅಮಲೆಯೂ ಇರುವರು.)

**ಅಮಲೆ**—ಪ್ರಾಣನಾಥ, ಏನಾಯಿತು ? ಹೀಗೇಕೆ ಮಾಡುತ್ತಿರುವಿರಿ ? ನಿಮ್ಮ ಈ ಸ್ಥಿತಿಯನ್ನು ನೋಡಿ ನನಗೆ ತುಂಬ ಭಯವಾಗುತ್ತಿದೆ !

**ಸಾಯು**— ಇನ್ನು ಏನಾಗಬೇಕು ? ಆಗಬಾರದ್ದು ಆಗಿಹೋಗುವದರಲ್ಲಿವೆ ! ನಿಯತಿಯು ಒಳಸಂಚು ನಡಿಸಿದೆ. ನಮ್ಮ ದುರದೃಷ್ಟವು ನಮಗೆ ಚೆನ್ನಾಗಿ ತನ್ನ ಕೈತೋರಬೇಕೆಂದಿವೆ ! ನಿಯತಿಯು ಒಳಸಂಚಿನ ಫಲವಾಗಿ ಇಂದು ಬೇಹುಳೆಯು ವಿವಾಹವು ಲಕ್ಷ್ಮೀಂದರನೊಡನೆ ನಡೆಯಬೇಕಾಗಿದೆ ! ದೈವದುರ್ವಿಪಾಕದಲ್ಲಿ ಸಿಕ್ಕ ನಾವು ತಕ್ಕ ಪ್ರತೀಕಾರವನ್ನು ಮಾಡದೆ ಸುಮ್ಮನಿರಬೇಕಾಗಿದೆ !

**ಅಮಲೆ**— ಇಂದಿನ ಈ ಶುಭದಿನದಲ್ಲಿ–ವಿವಾಹದ ಈ ಶುಭಲಗ್ನದಲ್ಲಿ ಹೀಗೇಕೆ ಮಾತಾಡುತ್ತಿರುವಿರಿ ? ವರನು ಬಂದಿದ್ದಾನೆ. ಲಗ್ನವಿಧಿಯ ಎಷ್ಟೋ ಭಾಗವು ಜರುಗಿಹೋಗಿದೆ. ಕನ್ಯಾ ಸಂಪ್ರದಾನವಿಧಿಯೊಂದು ಮುಖ್ಯವಾಗಿ ಉಳಿದಿದೆ. ಇಂತಹ ಸಮಯದಲ್ಲಿ ಹೀಗೆ ಚಂಚಲರಾಗುವದು ಉಚಿತವಲ್ಲ. ಯಾವುದೊಂದು ಕಾರಣದಿಂದ ಕೋಪಗೊಂಡು ಸಿಕ್ಕ ಸಿಕ್ಕ ಹಾಗೆ ಮಾತಾಡುವದು ಸರಿಯಲ್ಲ. ನಿಮ್ಮ ಕೋಪದ ಕಾರಣವಾವುದೆಂಬದನ್ನು ನನಗೆ ಹೇಳಿರಿ. ನಾನು ಸರಿಯಾದ ವ್ಯವಸ್ಥೆಯನ್ನು ಮಾಡಿಸುವೆನು.

**ಸಾಯು**— ನಾನು ಈ ಸಾರೆ ವಾಣಿಜ್ಯಯಾತ್ರೆಗೆ ಏಕೆ ಹೋಗಿದ್ದೇನಾದೀತು ? ಅಲ್ಲಿ ಚಾಂದ ಸವದಾಗರನ ದರ್ಶನವೇಕಾಗಬೇಕು ? ನಾನು ನನ್ನ ಮಗಳನ್ನು ನಿನ್ನ ಮಗನಿಗೆ ಕೊಡುವೆನೆಂದು ಏಕೆ ವಚನಕೊಡಬೇಕಾಗಿತ್ತು ? ಇದೆಲ್ಲವೂ ನಿಯತಿಯ ಒಳಸಂಚಿನ ಪರಿಣಾಮವಲ್ಲದೆ ಮತ್ತೇನು ? ನಿಯತಿಯು ಕಾರಸ್ಥಾನವು ಇಷ್ಟಕ್ಕೇ ತೀರಿಲ್ಲ. ಇದರ ಕೊನೆಯ ಪರಿಣಾಮವು–ತೀರ ಭಯಂ

ಕರ ಕೃತಿಯು— ಇಂದಿನ ರಾತ್ರಿಯಲ್ಲಿ ಜರುಗಬೇಕಾಗಿದೆ. ಆಗ ಕೃತಾರ್ಥವಾದ ನಿಯತಿಯು ಗಹಗಹಿಸಿ ನಗಹತ್ತುವುದು. ಆದರೆ ನಾನದನ್ನು ಹೇಗೆ ಸಹಿಸಿ ಕೊಳ್ಳಲಿ ? ನಿಯತಿಯ ಆ ಘೋರ ಕೃತಿಯನ್ನು ನೆನಿಸಿಕೊಂಡರೆ, ನನ್ನ ಮೈಮೇಲೆ ಮುಳ್ಳುಗಳೇಳುವವು! ಕಣ್ಣಿಗೆ ಕತ್ತಲು ಗವಿಯುವದು! ದುಃಖಾತಿರೇಕದಿಂದ ಹೃದಯವು ದಹಿಸಹತ್ತುವದು!

**ಅಮಲೆ**— ಆಗುವದಾದರೂ ಏನು! ಹೀಗೆ ಗೂಢವಾಗಿ ಮಾತಾಡಿ ನನ್ನನ್ನು ಗೊಂದಲದಲ್ಲಿ ಕೆಡವಬೇಡಿರಿ!

**ಸಾಯ** — ಭವಿಷ್ಯವನ್ನು ಕೇಳಿಕೊಳ್ಳುವ ಧೈರ್ಯವು ನಿನಗಿದೆಯೆ ! ಇದ್ದರೆ, ಹೇಳುವೆನು ಕೇಳು. ( ಅಮಲೆಯ ಕಿವಿಯಲ್ಲಿ ಭವಿಷ್ಯವಾಣಿಯನ್ನುಚ್ಚರಿಸುವನು.)

**ಅಮಲೆ**— ( ಗಾಬರಿಯಾಗಿ ) ನಾವು ಪೂರಾ ಹಾಳಾದೆವೆನ್ನಬೇಕು ! ಜ್ಯೋತಿಷಿಯು ಜ್ಯೋತಿಷ್ಯದ ಆಧಾರದಿಂದ ಸರಿಯಾಗಿ ಲೆಕ್ಕಮಾಡಿ ಹೀಗೆ ಹೇಳಿದನೆಂದಿರಲ್ಲವೆ?

**ಚಾಂದ**— ಅಹುದು. ಇಂತಹ ಸಂಗತಿಯನ್ನು ನಾನೇ ಕಲ್ಪಿಸಿಕೊಂಡು ಹೇಳೇನೆ ?

**ಅಮಲೆ**— ದಂಪತಿಗಳ ಪ್ರಥಮ ಮಿಲನದ ರಾತ್ರಿಯಲ್ಲಿಯೆ ಈ ಅನರ್ಥವು ನಡೆಯತಕ್ಕದ್ದಿದೆಯೆ?

**ಚಾಂದ**—ಅಹುದು. ಇಂದಿನ ರಾತ್ರಿಯಲ್ಲಿಯೆ ! ದಂಪತಿಗಳ ಪ್ರಥಮ ಮಿಲನ ಸಮಯದಲ್ಲಿಯೆ !

**ಅಮಲೆ** — ಉಪಾಯವೇನು ! ಅಯ್ಯೊ, ನಾನದನ್ನು ನೋಡಿ ಸಹಿಸಲಾರೆನು! ಏನಾದರೂ ಮಾಡಿ ಭಾವೀ ಅನರ್ಥವನ್ನು ತಡೆಯಲೆಬೇಕು! ಅಯ್ಯೊ, ಮಗು ! ಬೇಹುಳೆ! ( ಬೇಹುಳೆಯು ಓಡಿ ಬರುವಳು.)

**ಬೇಹುಳೆ**— ಅವ್ವಾ, ಅವ್ವಾ–

**ಅಮಲೆ—** (ಮಗಳನ್ನಪ್ಪಿಕೊಂಡು) ಏಕಮ್ಮಾ?

**ಬೇಹುಳೆ—** ಅವ್ವಾ, ಹೊಸದಾಗಿ ಕುಂಕುಮವನ್ನು ಹಚ್ಚಿಕೊಳ್ಳ ಬೇಕೆಂದು ಮಾಡಿ, ಹಳೆಯ ಚಂದಿರಬಟ್ಟನ್ನು ಅಳುಕಿಸಹೋದೆನು—ಅಳುಕಲಿಲ್ಲ. ತೊಳೆದುಕೊಂಡರೂ ಇಲ್ಲದಾಗಲೊಲ್ಲದು. ಏನು ಮಾಡಿದರೂ ಹೋಗಲೊಲ್ಲದು. ಮೊದಲಿನ ಚಂದಿರಬೊಟ್ಟು ಎದ್ದು ಕಾಣುತ್ತಿರುವಾಗ ಹೊಸದಾಗಿ ಕುಂಕುಮ ಬೊಟ್ಟು ಹಚ್ಚಿಕೊಳ್ಳುವದರಲ್ಲಿ ಪ್ರಯೋಜನವೇನು?

**ಅಮಲೆ—** ಈ ಕುಂಕುಮತಿಲಕವನ್ನು ಹಚ್ಚಿದವರಾರಮ್ಮಾ?

**ಬೇಹುಳೆ—** ರಾಜ್ಞೀ, ನಿಯತಿಯ ಆಟವನ್ನು ನೋಡು! ಬೇಹುಳೆಯ ಹಣೆಯ ಮೇಲಿನ ಈ ಚಂದಿರಬೊಟ್ಟನ್ನು ನಾನು ಮೊದಲು ಚಂಪಕನಗರದ ಅರಮನೆಯಲ್ಲಿ ನೋಡಿದ್ದೆನು. ಅದು ಈಗಳೂ ಇವಳ ಲಲಾಟದಲ್ಲಿದೆ......

**ಅಮಲೆ—** ಸನಕಾದೇವಿಯು ಹಚ್ಚಿದ್ದಳೆ?

**ಬೇಹುಳೆ—** ಇಲ್ಲವ್ವಾ!

**ಅಮಲೆ—** ಮತ್ತಾರು ಹಚ್ಚಿದರು?

**ಬೇಹುಳೆ—** ಹೀಗೆ ಪೀಡಿಸಿ ಪೀಡಿಸಿ ಕೇಳಬೇಡ! ನಾನು ಹೇಳಲಾರೆನು! ಇವರ ಹೆಸರನ್ನು ಹೇಳಲಿಕ್ಕೆ ನನಗೆ ನಾಚುಗೆಯಾಗುವದಿಲ್ಲವೆ? (ಓಡಿ ಹೋಗುವಳು.)

**ಅಮಲೆ—** ಮಗಳ ಮಾತಿನ ಇಂಗಿತವು ಹೊಳೆಯಿತೆ?

**ಸಾಯು—** ಹೊಳೆಯಿತು. ಆದರೆ ಉಪಾಯವೇನೂ ಇಲ್ಲದಾಗಿದೆ! ನಿಯತಿಯ ಬರಹವು ಅಕ್ಷಯವಾದ್ದು— ಅನುಲ್ಲಂಘನೀಯವಾದುದು! ತಿಕ್ಕಿಕೊಂಡರೆ ಹೋಗುವದಲ್ಲ! ತೊಳೆದುಕೊಂಡರೆ ನಾಶವಾಗುವದಲ್ಲ! ಭೋಗಿಸಲೊಲ್ಲೆನೆಂದರೆ ಕೇಳುವದದಲ್ಲ! ಮಾನವನು ತನ್ನ ಹಣೆಯ ಬರಹದ ಶುಭಾಶುಭ ಫಲಗಳನ್ನು ಭೋಗಿಸಿಯೇ ತೀರಬೇಕು!

**ಅಮಲೆ**— ಪ್ರಾಣನಾಥ, ಅನರ್ಥ ಚಿಂತೆಮಾಡಬೇಡಿರಿ! ಜ್ಯೋತಿಷಿಯು ಹೇಳಿದ್ದ ಭವಿಷ್ಯವಾಣಿಯನ್ನು ಮರೆದು ಬಿಡಿರಿ. ಹುರುಪಿನಿಂದ ವಿವಾಹ-ವಿಧಿಯನ್ನು ಸಾಗಿಸಿರಿ. ನಮ್ಮ ಮಗಳು ಸಾಮಾನ್ಯಳಲ್ಲ. ಹಿಂದಿನ ಕಾಲದ ಸಾವಿತ್ರಿಯಂತೆ ತೇಜಸ್ವಿನಿಯು. ಶಕ್ತಿಸಂಪನ್ನಳು. ಅವಳು ಒಂದು ವೇಳೆ ತನ್ನ ಸೌಭಾಗ್ಯಕ್ಕೆ ವಿಧಿಯು ಅಡ್ಡಬಂದರೆ, ಸಾವಿತ್ರಿಯಂತೆ ಹೋರಾಡಿ ಜಯಶೀಲಳಾಗುವಳು! ತನ್ನ ಸೌಭಾಗ್ಯವನ್ನು ಚಿರಕಾಲ ಕಾಯ್ದುಕೊಳ್ಳುವಳು! ನಿನ್ನಿನ ರಾತ್ರಿಯಲ್ಲಿ ನಾನವಳಿಗೆ ಸತಿಯ ಕತೆಯನ್ನು ಹೇಳಿದೆನು. ಸೀತೆಯ ಚರಿತ್ರೆಯನ್ನು ಹೇಳಿದೆನು. ಸಾವಿತ್ರಿಯ ಕಥೆಯನ್ನು ವಿವರಿಸಿದೆನು. ಈ ಪತಿವ್ರತೆಯರ ಕಥೆಗಳನ್ನು ಕೇಳುವ ಅವಳ ಉತ್ಸುಕತೆಯನ್ನು ನೋಡಿ ನಾನು ಬೆರಗಾಗಿ ಹೋದೆನು. ಈ ಹದಿಬದೆಯರ ಮಾನಸಿಕ ಬಲದ ಕಾರ್ಯ ವಿವರಣೆಯನ್ನು ಕೇಳುತ್ತಿದ್ದ ಅವಳ ಕಣ್ಣುಗಳ ಹೊಳಪನ್ನು ನೋಡಿ ನಾನು ದಂಗುಬಡೆದು ಹೋದೆನು. ಕೊನೆಯಲ್ಲಿ ಅವಳು 'ನನಗೂ ಈ ಮಹಿಳೆಯರಂತೆ ವಿಪತ್ತು ಸಂಭವಿಸಿದರೆ, ನಾನು ಈ ಸತಿಯರಂತೆ ಸತ್ವವನ್ನು ಕಾಯ್ದುಕೊಳ್ಳಬಲ್ಲೆನೆ'? ಎಂದು ಕೇಳಿದಳು. ನಾನು ನಿಶ್ಚಯವಾಗಿಯೂ ಕಾಯ್ದುಕೊಳ್ಳುವೆಯೆಂದು ಹೇಳಿದೆನು. ಬಳಿಕ ಅವಳು 'ವಿಪತ್ತು ನನಗೆ ಒದಗಲೇ ಬೇಡ, ಒಂದುವೇಳೆ ವಿಧಿಯ ವಿಧಾನದಿಂದ ಒದಗಿದರೆ ನಾನೂ ಆ ಪತಿವ್ರತೆಯರಂತೆ ಪಾರಾಗಿ ಕೀರ್ತಿಮಂಡಿತೆಯಾಗದಿರೆನು,' ಎಂದು ನುಡಿದಳು. ನನಗೆ ಅವಳ ಮಾತುಗಳನ್ನು ಕೇಳಿ ಬಹು ಕೌತುಕವೆನಿಸಿತು. ಚಂಚಲ ಪ್ರಕೃತಿಯ ಅವಳು ಒಂದೇ ಒಂದು ದಿನದ ಅವಧಿಯಲ್ಲಿ ಗಂಭೀರಳಾಗಿಹೋಗಿದ್ದಾಳೆ. ಅವಕಾಶದ ಸಮಯದಲ್ಲಿ ಸಾವಿತ್ರಿಯ ಚರಿತ್ರೆಯನ್ನು ಪಠಿಸುತ್ತಿದ್ದಾಳೆ. ಇಂತಹ ಮಗಳ ವಿಷಯದಲ್ಲಿ ನಾವು ಚಿಂತಿಸಬೇಕೇ? ಇಂತಹ ಸತೀಶಿರೋಮಣಿಯ ಭವಿಷ್ಯವನ್ನು ಚಿಂತಿಸಿ ನಾವು ಭಯಗೊಳ್ಳಬೇಕೆ? ಯಾವ ಸತಿಯ ಕುಂಕುಮ ತಿಲಕವು ಅವಿನಾಶವಾಗಿದೆಯೊ ಅಕ್ಷಯವಾಗಿದೆಯೊ ಅವಳಿಗೆ ವೈಧವ್ಯವೆಂದಾದರೂ ಬಂದದ್ದುಂಟೇ! ಒಂದು ವೇಳೆ ಅದೃಷ್ಟದ ಪರಿಹಾಸದಿಂದ ವಿಪರೀತ ಪ್ರಸಂಗವೊದಗಿದಲ್ಲಿ ನಮ್ಮ ಮಗಳು ಯಮನೊಡನೆ ಹೋರಾಡದಿರಳು! ಆ ದುರ್ವಿಧಿಯನ್ನು ನಿಷ್ಫಲಗೊಳಿಸದಿರಳು!

**ಸಾಯ:**— ಇನ್ನು ನಾನು ವಿವಾಹದ ಸಿದ್ಧತೆಗೆ ತೊಡಗುವೆನು. ನೀನು ಮಗಳ ಪೀಡೆಯ ಪರಿಹಾರಕ್ಕಾಗಿ ಮನಸಾದೇವಿಯ ಪೂಜೆ ಮಾಡು. ದೇವಿಯ

ಕೃಪೆಯನ್ನು ಯಾಚಿಸು. [ನೇಪಥ್ಯದಲ್ಲಿ ವಾದ್ಯಗಳ ಸಪ್ಪಳವಾಗುವದು.] ಬೀಗರು ಬರುತ್ತಿರುವರು. ನಾನಿನ್ನು ಅವರನ್ನು ಎದಿರ್ಗೊಂಡು ಕರೆತರಲಿಕ್ಕೆ ಹೋಗುವೆನು. (ಹೋಗುವನು. ಬೇಹುಳಿಯು ಪ್ರವೇಶಿಸುವಳು. ಹಿಂದೆ ದಾಸಿಯರು ಅಲಂಕಾರ-ಭೂಷಣಗಳನ್ನು ಹಿಡಿದುಕೊಂಡು ಬರುವರು. ಎಲ್ಲರೂ ಬೇಹುಳಿಯನ್ನು ಶೃಂಗರಿಸುವರು. ಬಳಿಕ ಬೇಹುಳಿಯು ತಾಯಿಗೆ ನಮಸ್ಕರಿಸಿದಳು. ಅಮಲೆಯು ಆಶೀರ್ವದಿಸಿ ಮಮತೆಯಿಂದ ಮುದ್ದಿಟ್ಟಳು.)

**ಬೇಹುಳಿ:—** ಅವ್ವಾ—

**ಅಮಲೆ:—** ಏಕೆ ಮಗು ?

**ಬೇಹುಳಿ:—** ಮದುವೆಯ ರಾತ್ರಿಯಲ್ಲಿ ಸಾವಿತ್ರಿಯು ಅತ್ತಳೇನು ?

**ಅಮಲೆ:—** ಇಲ್ಲವಮ್ಮ ಇಲ್ಲ! ಸತ್ಯವಾನನ ಆಯುಸ್ಯವು ಅಲ್ಪವಾಗಿದೆಯೆಂಬುದನ್ನವಳು ಅರಿತಿದ್ದರೂ ಶೋಕಿಸಲಿಲ್ಲ! ಮೊದಲು ಅವಳೂ ನಿನ್ನಂತೆಯೆ ಚಪಲಚಂಚಲ ಬಾಲೆಯಾಗಿದ್ದಳು. ಆದರೆ ತನ್ನ ಭಾವೀ ಪತಿಯು ಅಲ್ಪಾಯುಷಿಯಾಗಿರುವನೆಂಬದನ್ನು ಅರಿತ ಕೂಡಲೆ ಮನಸ್ಸನ್ನು ಗಟ್ಟಿಮಾಡಿಕೊಂಡಳು. ಮೃತ್ಯುವಿನೊಡನೆ ಹೋರಾಡುವ ಅಸೀಮ ಸಾಹಸಕ್ಕೆ ಬದ್ಧಕಂಕಣಳಾದಳು. ಅನುಲ್ಲಂಘನೀಯವಾದ ವಿಧಿಲಿಖಿತವನ್ನು ಲಂಘಿಸಿಯೆ ಬಿಡುವೆನೆಂದು ದೃಢ ನಿಶ್ಚಯ ಮಾಡಿಕೊಂಡಳು. ತನ್ನ ಸೌಭಾಗ್ಯಕ್ಕೆ ಪ್ರತಿಕೂಲವಾಗಿದ್ದ ಹಣೆಯ ಬರಹವನ್ನು ಅನುಕೂಲತೆಯಲ್ಲಿ ಮಾರ್ಪಡಿಸಿಕೊಂಡು ಅಸಾಧ್ಯಸಾಧನೆ ಮಾಡುವೆನೆಂಬ ಆತ್ಮವಿಶ್ವಾಸದಿಂದ ಮೃಣಾಳ ತಂತುವಿನಂತಿಪ್ಪ ಪಾತಿವ್ರತ್ಯದ ಸೂಕ್ಷ್ಮ ಧರ್ಮದಿಂದ ಚಲಿಸದಿದ್ದಳು. ಮುಂದೆ ಸತ್ಯವಾನನ ಪಾಣಿಗ್ರಹಣ ಮಾಡಿದ ಆ ಸತಿಯು ಪತಿಯನ್ನು ಛಾಯೆಯಂತೆ ಅನುಸರಿಸಿಕೊಂಡಿದ್ದು ಯಮನೊಡನೆ ಹೋರಾಡಿದಳು. ಯಮನು ತೋರಿದ ಹಲವು ವಿಧಗಳಾದ ಪ್ರಲೋಭನೆಗಳಿಗೆ ಮರುಳೆಯಾಗದೆ, ಪಾತಿವ್ರತ್ಯದ ಪರಮ ಶಕ್ತಿಯಿಂದ ಜಯಶೀಲಳಾದಳು. ಯಮನನ್ನು ಮೆಚ್ಚಿಸಿ, ಪತಿಯ ಪುನರ್ಜೀವವನ್ನು ಸಂಪಾದಿಸಿ ಚಿರಸೌಭಾಗ್ಯವತಿಯಾಗಿ ಸುಖಿಸಿದಳು. ತನ್ನ ಅಪೂರ್ವ ಮಾನಸಿಕ ಬಲದಿಂದ, ಅನುಪಮ ಪಾತಿವ್ರತ್ಯ ಪ್ರಭಾವದಿಂದ ಕೀರ್ತಿಮಂಡಿತೆಯಾಗಿ ನಮ್ಮೆಲ್ಲರಿಗೆ ಆದರ್ಶ ಸತಿಯಾಗಿ ಇಂದಿಗೂ ಅಮರಳಾಗಿದ್ದಾಳೆ.

**ಬೇಹುಳಿ** — ಬೇಹುಳಿಯೆಂದು ನನಗೇಕೆ ಹೆಸರಿಟ್ಟೆ? ಸಾವಿತ್ರಿಯೆಂದು ಏಕೆ ಇಡಲಿಲ್ಲ? ಸಾವಿತ್ರಿ ಎಂಬ ಹೆಸರು ಒಳ್ಳೆ ಮಧುರವಾದ್ದು!

**ಅಮಲೆ** — ಮಗು, ಹೆಸರಿನಲ್ಲೇನಿದೆ? ಮಾನವನು ತನ್ನ ಗುಣಗಳಿಂದ ಶಕ್ತಿಯಿಂದ ಪ್ರಸಿದ್ಧಿಯನ್ನು ಪಡೆಯುವನಲ್ಲದೆ, ತೊಟ್ಟಿಲಲ್ಲಿಟ್ಟುಕೊಂಡಿದ್ದ ಹೆಸರಿನಿಂದಲ್ಲ! ನಾಮಕರಣವು ಬೇಹುಳಿಯೆಂದಿದ್ದರೂ, ಸಾವಿತ್ರಿಯಂತಾಚರಿಸಿ ಸತೀಕುಲಶಿರೋಮಣಿಯೆಂದು ಖ್ಯಾತಿಯಾಗಲಿಕ್ಕೆ ಪ್ರತಿಬಂಧವುಂಟಾಗದು!

**ಬೇಹುಳಿ** — ಅಮ್ಮಾ, ನಾನೂ ಸಾವಿತ್ರಿಯಂತೆ ಹೆಸರುವಾಸಿನಿಯಾದೇನೆ?

**ಅಮಲೆ** —ಏಕಾಗಬಾರದು? ಪ್ರಬಲವಾದ ಇಚ್ಛೆಯೂ ಅಸೀಮವಾದ ಕ್ರಿಯೆಯೂ ಇದ್ದವರಿಗೆ ಅಸಾಧ್ಯವಾದ್ದು ಯಾವದೂ ಇಲ್ಲ! (ಆತ್ಮಗತಂ) ವಿಧಾತನ ವಿಧಾನವು ಹೇಗಿದೆಯೊ ಏನೊ! ಮಗಳ ಬಯಕೆಯಂತೂ ವಿಚಿತ್ರವಾಗಿದೆ. (ಪ್ರಕಾಶರೀತಿಯಿಂದ ಬೇಹುಳಿಯ ಸಖಿಯರನ್ನುದ್ದೇಶಿಸಿ) ಇನ್ನು ನೀವು ಇವಳನ್ನು ಕರೆದುಕೊಂಡು ಹೋಗಿರಿ. ನನಗೆ ಬೇರೆ ಕೆಲಸವಿದೆ. [ಬೇಹುಳಿಯು ಸಖಿಯರೂ ಹೋಗುವರು.]

[ಬೀಗರು ವರನನ್ನು ಕರೆದುಕೊಂಡು ಸಮಾರೋಹದಿಂದ ಬರುವರು. ಲಕ್ಷ್ಮೀಂದರನು ಶ್ವಶುರಗೃಹದಲ್ಲಿ ಕಾಲಿಡುತ್ತಲೆ, ತಲೆಯ ಮೇಲಿನ ಛತ್ರವು ಅಕಸ್ಮಾತ್ತಾಗಿ ಸುಡಹತ್ತುವದು. ನೆರೆದವರೆಲ್ಲರು ಗಾಬರಿಯಾಗುವರು. ಚಾಂದ ಸವದಾಗರನು ಧಾವಿಸಿ ಹೋಗಿ ಸೇವಕನ ಕೈಯಲ್ಲಿಯ ಛತ್ರವನ್ನು ಕಸಿದುಕೊಂಡು ದೂರ ಬಿಸಾಡುವನು. ಎಲ್ಲರೂ ಒಳಹೋಗುವರು. ಉತ್ತೇಜಿತರಾದ ಚಾಂದ ಸವದಾಗರನೂ ಸಾಯುಸವದಾಗರನೂ ಇರುವರು.]

**ಚಾಂದ** — ಬಾಲಮಿತ್ರನೆ, ಒಂದು ಮಾತನ್ನು ನಾನು ನಿನಗೆ ಈ ಮೊದಲೇ ಹೇಳಬೇಕಾಗಿತ್ತು. ಆದರೆ ತಕ್ಕ ಸಮಯವು ದೊರೆಯದ್ದರಿಂದ ಈ ವರೆಗೂ ಹೇಳಲಿಕ್ಕಾಗಿರಲಿಲ್ಲ. ಇದೇ ಈಗ ನಡೆದ ದುರ್ಘಟನೆಯನ್ನು ನೋಡಿ, ನಾನು ಚಿಂತಾಕ್ರಾಂತನಾಗಿ ಹೋಗಿರುವೆನು! ಭಾವೀ ಸಂಕಟವನ್ನು ನೆನೆದು ಭಯಭೀತನಾಗಿ ಹೋಗಿದ್ದೇನೆ! ನೀನು ನನ್ನ ಮಿತ್ರನೂ ಅಹುದು. ಬೀಗನೂ ಅಹುದು. ಇನ್ನು ನಮ್ಮಿಬ್ಬರ ಹಿತಾಹಿತಗಳು ಏಕತ್ರಿತವಾಗಿವೆ. ಈ ಪ್ರಸಂಗ

ದಲ್ಲಿ ನಾವಿಬ್ಬರೂ ಏಕಮನಸ್ಸಿನಿಂದ ವಿಚಾರಿಸಿ, ಏಕತ್ರಿತರಾಗಿ ಕಾರ್ಯಮಾಡಿ ಭಾವೀ ವಿಪತ್ತನ್ನು ಪರಿಹರಿಸಿಕೊಳ್ಳಬೇಕಾಗಿದೆ. ಇಂತಹ ವೇಳೆಯಲ್ಲಿ ನೀನು ನನ್ನದೊಂದು ಪ್ರಾರ್ಥನೆಯನ್ನು ಮನ್ನಿಸಲಾರೆಯಾ ?

**ಸಾಯ:**—ಗೆಳೆಯನೆ, ನಡೆದ ದುಶ್ಶಕುನವನ್ನು ನೋಡಿ ನಾನೂ ನಿನ್ನಂತೆಯೆ ಕಳವಳಗೊಂಡಿದ್ದೇನೆ ! ಮುಂದೇನಾಗುವದೊ ಏನೊ ಎಂದು ಚಿಂತೆಗೊಳಗಾಗಿದ್ದೇನೆ ! ವಿವಾಹೋತ್ಸವದ ಮಂಗಲಕಾರ್ಯದಲ್ಲಿ ಹೀಗೆ ಅಮಂಗಲವ್ಯಾಪಾರವು ನಡೆದುದನ್ನು ನಾನಿದುವರೆಗೆ ಕಂಡವನಲ್ಲ ! ಈ ದುಶ್ಚಿಹ್ನದ ಪ್ರತೀಕಾರಕ್ಕಾಗಿ—ಭಾವೀ ಅನರ್ಥದ ಪರಿಹಾರಕ್ಕಾಗಿ—ನೀನು ಯಾವುದೇ ಉಪಾಯವನ್ನು ಸೂಚಿಸಿದರೂ, ನಾನದನ್ನು ನೆರವೇರಿಸುವೆನು. ನೀನು ಯಾವ ಅನುಮಾನಕ್ಕೂ ಒಳಗಾಗದೆ, ಸ್ಪಷ್ಟವಾಗಿ ಮಾತಾಡು.

**ಚಾಂದ**—ಒಂದೇ ವೇಳೆಯಲ್ಲಿ ಮಾಳಿಗೆಯಿಂದ ಆರು ಹಾವುಗಳು ಇಳಿದು ಬಂದು ನನ್ನ ಆರುಮಕ್ಕಳನ್ನು ಒಮ್ಮೆಲೆ ಕಡಿದು ಪ್ರಾಣಹರಣ ಮಾಡುವದುಸಂಭವನೀಯ ಸಂಗತಿಯೆ ? ಆದರೆ ಈ ಅಸಂಭವನೀಯ ಸಂಗತಿಯು ತನ್ನ ವಿಷಯದಲ್ಲಿ ಸಂಭವನೀಯವಾಗಿಲ್ಲವೆ ? ಮಂತ್ರ ತಂತ್ರಗಳಲ್ಲಿ ಪಾರಂಗತರಾಗಿದ್ದ ಧನ್ವಂತರಿಗುರುಗಳು ಸರ್ಪದಂಶನದಿಂದ ಮಡಿದರೆಂಬದು ಆಶ್ಚರ್ಯಕರ ಸಂಗತಿಯಲ್ಲವೆ? ನನ್ನ ಬಳಿಯಲ್ಲಿದ್ದ ಮಹಾಜ್ಞಾನವನ್ನು ಒಬ್ಬ ಹೆಂಗುಸು ಮೋಸದಿಂದ ಅಪಹರಿಸಿದಳೆಂಬುದು ಸೋಜಿಗದ ಮಾತಲ್ಲವೆ ? ನನ್ನ ಮಧುಕರ ಹಡಗವು ಒಮ್ಮಿಂದೊಮ್ಮೆಲೆ ನೀರಿನಲ್ಲಿ ಮುಳುಗಿ ಹೋದದ್ದು ಸಾಮಾನ್ಯ ಸಂಗತಿಯೆ ? ಇವೆಲ್ಲವುಗಳ ಮೇಲಿಂದ ನನ್ನ ಆಯುಷ್ಯದಲ್ಲಿ ನನಗೆ ಸಂಬಂಧಿಸಿ ಯಾವ ಸಂಗತಿ ನಡೆದೀತು ? ಯಾವುದು ನಡೆಯಲಿಕ್ಕಿಲ್ಲ ? ಎಂಬುದರ ನಿಯಮವಿಲ್ಲ ! ವಿಪರೀತ ಪ್ರಸಂಗವಲ್ಲಿ ಸಿಕ್ಕ ನನ್ನನ್ನು ಇನ್ನೂ ಹಣ್ಣುಮಾಡಲಿಕ್ಕೆ ಅಸಂಭವನೀಯ ಸಂಗತಿಗಳು ತಾವೇ ತಾವಾಗಿ ನನ್ನ ಕಡೆಗೆ ಸಾಗಿಬರುವುದರಲ್ಲಿವೆ ! ಇಂತಹ ವೇಳೆಯಲ್ಲಿ ನಾನು ನಿನಗೆ ಒಂದೇ ಒಂದು ಬಿನ್ನಹವನ್ನು ಮಾಡಿಕೊಳ್ಳಬಯಸಿದ್ದೇನೆ. ನೀನಿದನ್ನು ಪೂರ್ಣಮಾಡಲಿಕ್ಕೆಬೇಕು.

**ಸಾಯ:**—ನಿಸ್ಸಂದೇಹವಾಗಿ ಹೇಳು. ನಾನು ನಿನ್ನಮಾತನ್ನು ತಪ್ಪದೆ ನಡಿಸುವೆನು.

**ಚಾಂದ:**— ಜ್ಯೋತಿಷಿಯು ಹೇಳಿದ ಭವಿಷ್ಯವನ್ನು ನೀನು ಕೇಳಿರುವೆಯಲ್ಲವೆ? ವಿವಾಹದ ರಾತ್ರಿಯಲ್ಲಿ-ದಂಪತಿಗಳ ಪ್ರಥಮಮಿಲನವಸಮಯದಲ್ಲಿ...

**ಸಾಯ:**— ಮಿತ್ರನೆ, ಮುಂದಿನ ಮಾತುಗಳನ್ನು ಉಚ್ಚರಿಸುವದು ಬೇಡ! ಜ್ಯೋತಿಷಿಯ ಭವಿಷ್ಯದ್ವಾಣಿಯನ್ನು ಮರೆದಿದ್ದೆನು. ಅದು ತಾನೇ ತಾನಾಗಿ ಮರೆವಿರಲಿಲ್ಲ— ಪ್ರಯತ್ನಪೂರ್ವಕವಾಗಿ ಮರೆದಿದ್ದೆನು. ನೀನದನ್ನು ಮತ್ತೆ ನನ್ನ ನೆನಪಿಗೆ ತಂದುಕೊಟ್ಟೆ. ನಿಯತಿಯು ಮಹಾಭಯಾನಕವಾದದ್ದು! ನನ್ನ ಮಗಳು ಸಾಕ್ಷಾಲ್ಲಕ್ಷ್ಮಿಯಂತೆ ರೂಪಗುಣ ಮಂಡಿತೆಯು. ಸರಸ್ವತಿಯಂತೆ ಬುದ್ಧಿಮತಿಯು, ಕಲಾಪೌರ್ಣೆಯು. ನನ್ನ ಆ ಮಮತೆಯ ಮಗಳಿಗೆ ಮದುವೆಯ ದಿನದ ರಾತ್ರಿಯಲ್ಲಿಯೆ............

**ಚಾಂದ**— ನಾನು ಹಾಗೆಂದಿಗೂ ಆಗಗೊಡೆನು! ಜ್ಯೋತಿಷಿಯ ಭವಿಷ್ಯವಾಣಿಯು ನಿಷ್ಫಲವಾಗುವಂತೆ ಮಾಡುವೆನು! ನಿಯತಿಯ ಭಯಾನಕ ವ್ಯಾಪಾರವು ನಡೆಯದಂತೆ ಮಾಡುವೆನು! ಆದರೆ ನೀನು ಮಾತ್ರ ನನ್ನದೊಂದು ಮಾತನ್ನು ನಡಿಸಲಿಕ್ಕೆ ಬೇಕು!

**ಸಾಯ**— ಅದಾವುದು ಹೇಳು. ಬೇಗನೆ ಹೇಳು.

**ಚಾಂದ**— ಜ್ಯೋತಿಷಿಯು ಸೂಚಿಸಿದ ಭವಿಷ್ಯವನ್ನು ಕೇಳಿಕೊಂಡ ಕೂಡಲೆ ನಾನು ಪ್ರತೀಕಾರದ ಪ್ರಯತ್ನವನ್ನು ನಡಿಸಿರುವೆನು. ಸಂತಾಲಿ ಪರ್ವತದ ಉನ್ನತ ಪ್ರದೇಶದಲ್ಲಿ ಕಬ್ಬಿಣದ ಕೋಟೆಯನ್ನು ಕಟ್ಟಿಸಲಿಕ್ಕೆ ಆಜ್ಞಾಪಿಸಿರುವೆನು. ಕೆಲಸವು ಭರದಿಂದ ಸಾಗಿದೆ. ಇನ್ನು ತುಸು ದಿವಸಗಳಲ್ಲಿ ಮುಗಿಯುವದು. ಈ ಕೋಟೆಯನ್ನು ಕಾಯಲಿಕ್ಕೆ ಸಾವಿರಾರು ಸಶಸ್ತ್ರ ಶಿಪಾಯಿಗಳನ್ನು ನೇಮಿಸುವೆನು. ಅಲ್ಲಿ ನೂರಾರು ನವಿಲುಗಳನ್ನೂ ಮುಂಗುಲಿಗಳನ್ನೂ ಇರಿಸುವೆನು. ಉಪಯುಕ್ತವಾದ ಹಲವು ವನಸ್ಪತಿಗಳನ್ನು ಬೆಳಸುವೆನು. ಎಲ್ಲ ರೀತಿಗಳಿಂದಲೂ ತಕ್ಕ ವ್ಯವಸ್ಥೆ ಮಾಡಿಸುವೆನು.

**ಸಾಯ**— ಇದು ಮುಂದಿನ ಮಾತು! ಇಂದಿನ ರಾತ್ರಿಯ ಗತಿಯೇನು? ಇಂದಿನ ಇರುಳಿನಲ್ಲಿಯೆ......

**ಚಾಂದ**— ಈ ವಿಷಯದಲ್ಲಿಯೆ ನಾನು ನಿನಗೆ ಪ್ರಾರ್ಥನೆ ಮಾಡಿಕೊಳ್ಳಬೇಕಾಗಿದೆ. ದಂಪತಿಗಳ ಪ್ರಥಮ ಮಿಲನದ ಸಮಾರಂಭವು ಇಂದು ಈ ಮನೆ

ಯಲ್ಲಿ ನಡೆಯುವದು ಬೇಡ. ಕಬ್ಬಿಣದ ಕೋಟೆಯು ಹಾಗು ಒಳಗಿನ ಮನೆಗಳ ಸಕಲ ಸಿದ್ಧತೆಯಾದ ಬಳಿಕ ನಾನು ನಿನಗೆ ತಿಳುಹುವೆನು. ಆ ಬಳಿಕ ಒಂದು ಶುಭಮುಹೂರ್ತದಲ್ಲಿ ಶೋಭನಕಾರ್ಯವು ಸಾಂಗವಾಗಲಿ. ನೀನು ಒಲ್ಲೆನೆನ್ನದಿರು. ನನ್ನ ಈ ಬಿನ್ನಹವನ್ನು ಅಲ್ಲಗಳೆಯದಿರು.

**ಸಾಯ**—ಆದರೆ ಕುಲಾಚಾರ......

**ಚಾಂದ**—ಕುಲಾಚಾರವೆ ? ವಂಶಪರಂಪರಾಗತ ರೂಢಿಯೆ ? ಇದಕ್ಕಾಗಿ ಮುದ್ದು ಮಕ್ಕಳ ಜೀವನವನ್ನು ಬಲಿಗೊಡಬೇಕೆ ? ಕುಲಾಚಾರಕ್ಕಿಂತಲೂ ಅಳಿಯನ ಜೀವನವ ಬೆಲೆಯು ಹೆಚ್ಚೆಂದು ನಿನಗೆ ಅನಿಸುವದಿಲ್ಲವೆ ? ಕುಲಾಚಾರದ ಪಾಲನೆಗಾಗಿ ಅಳಿಯನ ಬಲಿಗೊಡುವೆಯಾ ? ಮಗಳ ವೈಧವ್ಯವನ್ನು ನೋಡುವೆಯಾ ?

**ಸಾಯ**—ಮಿತ್ರನೆ, ಕೋಪಗೊಳ್ಳಬೇಡ. ಶಾಂತನಾಗು. ನಿನಗೆ ನಾನೊಂದು ಪ್ರಾರ್ಥನೆಯನ್ನು ಮಾಡಿಕೊಳ್ಳುವೆನು. ನೀನು ನನ್ನ ಪ್ರಾರ್ಥನೆಯನ್ನು ಮನ್ನಿಸಿದರೆ, ಭಾವೀ ಅನರ್ಥವು ತಪ್ಪುವಂತಿದೆ.

**ಚಾಂದ**—ಅದಾವುದು ? ಭಾವೀ ಅನರ್ಥ-ಪರಿಹಾರಕ್ಕಾಗಿ ಶಕ್ಯವಿದ್ದ ಕಾರ್ಯಗಳನ್ನು ಮಾಡಲಿಕ್ಕೆ ನಾನು ಸಿದ್ಧನಿದ್ದೇನೆ.

**ಸಾಯ**—ನಾನಾಡುವ ಮಾತುಗಳನ್ನು ಕೇಳಿ ನಿನಗೆ ಸಿಟ್ಟು ಬರಬಹುದಾಗಿದೆ. ಆದರೆ ಮಾತಾಡದಿದ್ದರೆ ನಡೆಯುವಂತಿಲ್ಲ. ಮಗಳ ಆಸನ್ನವೈಧವ್ಯದ ಕಲ್ಪನೆಯಿಂದ ಅತಿಶಯ ಕಾತರನಾಗಿದ್ದ ನಾನು ಅನಿವಾರ್ಯವಾಗಿ ಮಾತಾಡಬೇಕಾಗಿದೆ.

**ಚಾಂದ:**—ಅದಾವುದು ? ಹೇಳಿಬಿಡು.

**ಸಾಯ:**—ನೀನು ಮನಸಾದೇವಿಯ ಪೂಜೆಯನ್ನು ಮಾಡಬೇಕು. (ಚಾಂದನು ಕೋಪಾತಿಶಯದಿಂದ ಮಾತಾಡದಿರುವನು) ಇದರಿಂದ ಮನಸಾದೇವಿಯು ಸಂತುಷ್ಟಳಾಗುವಳು. ಸರ್ಪಗಳ ಉಪಟಳವು ಇಲ್ಲದಾಗುವದು. ನಾವಿಬ್ಬರೂ ನಿಶ್ಚಿಂತರಾಗುವೆವು.

**ಚಾಂದ:**— (ಉನ್ಮಾದನಂತೆ) ಮನಸೆಯ ಪೂಜಕನು ನಾನಲ್ಲ. ನೀನು. ಬೇಕಾದರೆ ನೀನು ಪೂಜೆಮಾಡಿ ಪ್ರಸನ್ನತೆಯನ್ನು ಸಂಪಾದಿಸಿಕೊಂಡು ಅಳಿಯನ

ಸಂಕಟವನ್ನು ಪರಿಹರಿಸಿಕೊಳ್ಳಬಹುದು. ನಾನು ಮಹಾಜ್ಞಾನವನ್ನು ಏತಕ್ಕಾಗಿ ಕಳೆದುಕೊಂಡೆನು ? ಧನ್ವಂತರಿಗುರುಗಳನ್ನು ಏತಕ್ಕಾಗಿ ಬಲಿಗೊಟ್ಟೆನು. ಆರು ಮಕ್ಕಳನ್ನು ಯಾಕೆ ಕಳೆದುಕೊಂಡೆನು ? ಇನ್ನು ಆ ಕುರುಡ ಮನಸೆಯ ಪೂಜೆಯೆ ? ಅಸಂಭವ ! (ಕ್ಷಣ ಕಾಲ ಸುಮ್ಮನಿದ್ದು ಶಾಂತನಾಗಿ) ಮಿತ್ರನೆ, ನನ್ನ ಮಾತಿನಿಂದ ನಿನಗೆ ಕೋಪವುಂಟಾಗಿರಬಹುದು. ಆದರೆ ಉಪಾಯವಿಲ್ಲದಾಗಿದೆ. ಮಹಾದೇವನು ನನ್ನ ಆರಾಧ್ಯದೇವನು. ಶಿವ–ಪಾರ್ವತಿಯರನ್ನುಳಿದು ಅನ್ಯರನ್ನು ಪೂಜಿಸುವವನು ನಾನಲ್ಲ ! ಯಾವ ಕೈಯಿಂದ ದೇವಾಧಿದೇವನಾದ ಮಹಾದೇವನ ಹಾಗು ಆದಿಶಕ್ತಿಚಂಡಿಯ ಪೂಜೆಮಾಡಿರುವೆನೊ ಮಾಡುತ್ತಿರುವೆನೊ ಆ ಕೈಯಿಂದ ಅಪದೇವತೆಯಾದ ಮನಸೆಯ ಪೂಜೆಯನ್ನಾವಕಾಲಕ್ಕೂ ಮಾಡಲಾರೆನು ! ಮಹಾದೇವನು ತನ್ನ ಈ ಏಕನಿಷ್ಠಭಕ್ತನ ವಿಷಯದಲ್ಲಿ ಪ್ರಸನ್ನನಾಗಿ ಲಕ್ಷ್ಮೀಂದರನ ಜೀವವನ್ನುಳಿಸಿದರೆ ಉಳಿಸಲಿ ! ಒಂದು ವೇಳೆ ಲಕ್ಷ್ಮೀಂದರನು ಮನಸೆಯ ಕೋಪದಿಂದ ಮಡಿದರೂ ನಾನು ಆ ಮನಸೆಯ ಕರುಣಾಯಾಚನೆಯನ್ನು ಮಾಡೆನು ! ಲಕ್ಷ್ಮೀಂದರನು ನನ್ನ ಪ್ರೀತಿಯ ಮಗನಾಗಿದ್ದರೂ, ಇವನ ಜೀವನಕ್ಕಾಗಿ ಅಪದೇವತೆಯ ಪೂಜೆಮಾಡಲಿಕ್ಕೆ ನಾನು ಸಿದ್ಧನಾಗಲಾರೆನು. ನಿನ್ನ ಮಗಳು ನಿನ್ನ ಮನೆಯಲ್ಲಿದ್ದಾಳೆ. ಅಳಿಯನನ್ನು ನಿನಗೊಪ್ಪಿಸಿರುವೆನು. ನಿನ್ನ ಮನಸ್ಸಿರುವಂತೆ ಮುಂದಿನ ವ್ಯವಸ್ಥೆ ಮಾಡಿಕೊಳ್ಳು. ನಾನು ಹೊರಟು ಹೋಗುವೆನು. ಹರಹರ ಮಹಾದೇವ ! (ಹೊರಡುವನು)

**ಸಾಯ:**— [ಕೆಲ ಹೊತ್ತು ಸ್ತಬ್ಧನಾಗಿದ್ದು ಬಳಿಕ ಧಾವಿಸಿಹೋಗಿ ಚಾಂದನನ್ನು ಕರೆದುಕೊಂಡು ಬರುವನು] ಮಿತ್ರನೆ, ನಾನು ದುರ್ಬಲ ಪ್ರಕೃತಿಯವನು. ನಿನ್ನಂತಹ ಗಟ್ಟಿಮನಸ್ಸು ನನ್ನದಲ್ಲ. ಕಾರಣ ಮಗಳನ್ನೂ ಅಳಿಯನನ್ನೂ ನಿನ್ನ ಸ್ವಾಧೀನಪಡಿಸುವೆನು. ನಿನ್ನ ಇಷ್ಟವಿರುವಂತೆ ವಿವಾಹದ ವಿಧಾನಗಳನ್ನು ಸಾಗಿಸಿಕೊಳ್ಳು. ನಾನು ನಿನ್ನ ಯಾವ ವ್ಯವಸ್ಥೆಗೂ ಅಡ್ಡಬರುವದಿಲ್ಲ. [ನೇಪಥ್ಯದಲ್ಲಿ ಮಂಗಲವಾದ್ಯಗಳ ಸಪ್ಪಳವಾಗುವದು] ನಡೆ, ಒಳಗೆ ಹೋಗೋಣ. ವಿವಾಹದ ವಿಧಿಗಳನ್ನು ನೆರವೇರಿಸೋಣ. [ಇಬ್ಬರೂ ಹೋಗುವರು]

## ನಾಲ್ಕನೆಯ ಪ್ರವೇಶ

[ ಸಂತಾಲಿ ಪರ್ವತದ ಮೇಲಿನ ಕಬ್ಬಿಣದ ಮನೆ. ಬಳಿಯಲ್ಲಿ ಕಾಳುಕಮ್ಮಾರನಿರುವನು. ಚಾಂದನು ಪ್ರವೇಶಿಸುವನು ]

**ಚಾಂದ:**— ಕಾಳು,

**ಕಾಳು:**— ( ಕೈಜೋಡಿಸಿ ವಿನೀತನಾಗಿ ನಿಂತು ) ಮಹಾಪ್ರಭುಗಳೆ, ಅಪ್ಪಣೆಯಾಗಬೇಕು.

**ಚಾಂದ:**— [ ಕಾಳುವಿನ ಕೈಯನ್ನು ಹಿಡಿದು ] ವಿಶ್ವಾಸುಕ ಶಿಲ್ಪಿಯೆ, ಇಂದಿನ ಮಹತ್ಕಾರ್ಯದ ಜಯಾಪಜಯಗಳು–ಸುಖ ದುಃಖಗಳು ಕೇವಲ ನಿನ್ನ ಕರ್ತೃತ್ವಶಕ್ತಿಯನ್ನವಲಂಬಿಸಿವೆ. ನೀನು ಕರ್ಮಕುಶಲನೆಂಬ ಮನವರಿಕೆಯು ನನಗಿದ್ದುದರಿಂದಲೆ, ನಾನು ಈ ಮಹತ್ಕಾರ್ಯವನ್ನು ನಿನಗೊಪ್ಪಿಸಿದ್ದೆನು. ಹಾಗು ನೀನು ಕೈಕೊಂಡ ಈ ಕಾರ್ಯವನ್ನು ಅತಿಶಯ ದಕ್ಷತೆಯಿಂದ ಪೂರ್ಣಗೊಳಿಸುವೆ ಯೆಂಬ ವಿಶ್ವಾಸದಿಂದ ನಿರ್ಧಾಸ್ತನಾಗಿದ್ದೆನು. ಯುವರಾಜನ ಶೋಭನಪ್ರಸ್ತವು ಇಂದೇ ನಡೆಯಬೇಕಾಗಿದೆ. ಕೆಲಸವು ನಿರ್ದುಷ್ಟ ರೀತಿಯಿಂದ ಪೂರ್ಣ ವಾಗಿದೆಯಷ್ಟೆ ?

**ಕಾಳು:**— ಮಹಾಪ್ರಭುಗಳೆ, ಕೆಲಸವು ಮುಗಿದಿರುತ್ತದೆ. ನೋಡಿ ಕೊಳ್ಳಿರಿ.

**ಚಾಂದ:**— ನೋಡುತ್ತ ನಿಲ್ಲುವದಕ್ಕೆ ನನಗೆ ಅವಕಾಶವಿಲ್ಲ. ನಿನ್ನ ಮೇಲೆ ನನ್ನ ತುಂಬ ನಂಬಿಗೆಯಿದೆ. ಯಾವ ರಾಜನ ಜೀವನಮರಣಗಳು ನಿನ್ನ ಈ ಕೃತಿಯನ್ನವಲಂಬಿಸಿರುವವು. ನೀನು ಸರಿಯಾಗಿ ಕೆಲಸಮಾಡಿದ್ದರೆ, ಯುವನ ರಾಜನ ಜೀವನಕ್ಕೆ ದಕ್ಕೆ ತಗಲದು. ನೀನು ಕೆಲಸದಲ್ಲಿ ಯಾವದೇ ರೀತಿಯಿಂದ ಶಿಥಿಲತೆಯನ್ನು ತೋರಿದ್ದರೆ, ಯುವರಾಜನ ಬದುಕುವಿಕೆಯು ಸಂದೇಹಾಸ್ಪದ ಸಂಗತಿಯಾಗಿರುವದು. ನೀನು ಈ ಸಂಗತಿಯನ್ನು ಮನದಂಮ ಸರಿಯಾಗಿ ಉತ್ತರ ಹೇಳು.

**ಕಾಳು**— ಮಹಾಸ್ವಾಮಿ, ಹಿಡಿದ ಕೆಲಸವನ್ನು ಸಂಪೂರ್ಣ ಎಚ್ಚರಿಕೆ ಯಿಂದ ಕಡೆಹಾಯಿಸುವದು ನನ್ನ ಸ್ವಭಾವವು. ನನ್ನ ಈ ಕೃತಿಯಲ್ಲಿ ಕಿಂಚಿನ್ಮಾತ್ರವೂ ದೋಷವಿಲ್ಲ.

**ಚಾಂದ**— ನಿಶ್ಚಯವಾಗಿಯೂ ನಿರ್ದುಷ್ಟವಾಗಿದೆಯೆ ?

**ಕಾಳು**— ಮಹಾಪ್ರಭುಗಳೆ, ನನ್ನ ಶಿರವು ಹೊಣೆಯಾಗಿದೆ ! ಏನಾದರೂ ದೋಷವು ಕಾಣಿಸಿದರೆ, ನೀವು ನನ್ನ ಶಿರವನ್ನು ಹಾರಿಸಿ ಬಿಡಿರಿ !

**ಚಾಂದ**— ನಾನು ನಿಶ್ಚಿಂತನಾಗಿರಲಿಯುಷ್ಟೆ ?

**ಕಾಳು**— ಯಾವತರದ ಸಂದೇಹವನ್ನು ಹಿಡಿಯಬೇಡಿರಿ. ಗೃಹ ನಿರ್ಮಾಣವು ಉತ್ತಮರೀತಿಯಿಂದ ಕೊನೆಗಂಡಿದೆ.

**ಚಾಂದ**— [ ರತ್ನಹಾರವನ್ನು ಕೊಟ್ಟು ] ಇದು ಈಗಳಿನ ಇನಾಮು. ರಾತ್ರಿಯು ನಿರ್ವಿಘ್ನತೆಯಿಂದ ಕಳೆದು ಹೋದರೆ, ನಾಳಿನ ದರಬಾರದಲ್ಲಿ ನಿನ್ನನ್ನು ಬಹಳವಾಗಿ ಪುರಸ್ಕರಿಸುವೆನು. ನೀನು ಬೇಡಿದ ಬಹುಮಾನವನ್ನು ಕೊಡುವೆನು.

**ಕಾಳು**— ಮಹಾಸ್ವಾಮಿ, ತಮ್ಮ ದಯವೊಂದಿದ್ದರೆ ಸಾಕು. ನಿಮ್ಮ ಚರಣ ರಜದ ಹೊರತು ಬೇರೆ ಪುರಸ್ಕಾರವು ನನಗೆ ಬೇಡ. [ ಪಾದ ಧೂಳಿಯನ್ನು ಗ್ರಹಿಸುವನು ]

**ಚಾಂದ**— [ಆತ್ಮಗತಂ] ನಾನು ಮಾಡಬೇಕೆಂದಿದ್ದ ಕಾರ್ಯದ ಒಂದು ಭಾಗವು ಸರಿಯಾಗಿ ಸಾಗಿದೆಯೆಂದ ಹಾಗಾಯಿತು. ಈ ವಿಷಯದಲ್ಲಿ ನಿಶ್ಚಿಂತನಾಗಿ ಇನ್ನು ಎರಡನೆಯ ಭಾಗವನ್ನು ನಿರ್ವಿಘ್ನತೆಯಿಂದ ಪಾರುಗಾಣಿಸಬೇಕಾಗಿದೆ. ಎಲೆ ಕುರುಡ ಮನಸೆಯೆ, ಅಪದೇವತೆಯೆ, ನಾನು ನಿನ್ನ ರೋಷಕ್ಕೆ ಸೊಪ್ಪು ಹಾಕತಕ್ಕವನಲ್ಲ! ನಿನ್ನ ಕ್ರಿಯೆಗಳಿಗೆ ಸರಿಯಾದ ಪ್ರತಿಕ್ರಿಯೆಗಳನ್ನು ಮಾಡಿ ತಲೆ ಬಾಗುವಂತೆ ಮಾಡದೆ ಬಿಡುವವನು ನಾನಲ್ಲ !ಯಾರೊಡನೆ ಪ್ರತಿಭಟಿಸಿರುವೆಯೆಂಬುವರ ಕಲ್ಪನೆಯು ನಿನಗಿದೆಯೆ ? ಈ ಚಾಂದಸವದಾಗರನು ಅಪಜಯವನ್ನೆಂದೂ ಒಪ್ಪಿಕೊಳ್ಳತಕ್ಕವನಲ್ಲ! ವೈರಿಗಳಿಗೆ ಶರಣು ಹೋಗತಕ್ಕವನಲ್ಲ ! ಇಷ್ಟೆ ಅಲ್ಲ, ನಿಶ್ಚಲ ಧೈರ್ಯದಿಂದ ಅದ್ವಿತೀಯ ಸಾಹಸದಿಂದ ವೈರಿಗಳನ್ನು ಹಣ್ಣಿಗೆ ತಂದು ಅವರನ್ನು ತನ್ನ ಕಾಲಮೇಲೆ ಕೆಡವಿಕೊಂಡು ಕ್ಷಮಿಸತಕ್ಕವನು ! ಇಂತಹ ವೀರನೊಡನೆ ಅಪದೇವತೆಯಾದ ನೀನು ವಿರೋಧ ಬಳಿಸುವದು ತರವೆ? ಆಗಲಿ... ಏನಾಗುವದೊ ನೋಡುವೆನು- [ಮೈಯು ನಡುಗುವುದು ] ಹೀಗೇಕೆ ಆಗುತ್ತಿರಬಹುದು ? ನನ್ನ ಸಂಕಲ್ಪವು ಸರಿಯಾಗಿ ಸಿದ್ಧಿಸಲಿಕ್ಕಿಲ್ಲವೆ ? ನಾನು ಕೃತಕಾರ್ಯನಾಗಲಿಕ್ಕಿಲ್ಲವೆ ? ಆಗದೇನು ? ಮಾನಸಿಕ ದುರ್ಬಲತೆಯನ್ನು ಪರಿಹರಿಸಿಕೊಂಡು ಸಾಹಸ ಭರದಿಂದ ಕಾರ್ಯ ಪ್ರವೃತ್ತನಾಗುವೆನು. ನಿಶ್ಚಯವಾಗಿಯೂ ಸಿದ್ಧಿಯನ್ನು ಪಡೆಯುವೆನು. ಹರಹರ ಮಹಾದೇವ ! ...... [ ಹೋಗುವನು ]

**ಕಾಳು**—[ರತ್ನಹಾರವನ್ನು ತಿರುವಿ ತಿರುವಿ ನೋಡಿಕೊಳ್ಳುವನು] ಬಹು ಬೆಲೆಯುಳ್ಳ ಹಾರ! ಝಗ ಝಗ ಹೊಳೆಯುತ್ತದೆ! ಪ್ರಕಾಶದಿಂದ ನನ್ನ ಕಣ್ಣು

ಕುಕಸ್ಮಿತ್ವವೆ! ಇದನ್ನು ತೆಗೆದುಕೊಂಡು ನಾನೇನು ಮಾಡಲಿ? ನನಗಂತೂ ಇದರಿಂದ ಉಪಯೋಗವಿಲ್ಲ! ಯಾರಿಗೆ ಕೊಡಲಿ?...ಹಾ...ಅವಳಿಗೆ ಕೊಟ್ಟರೆ? ಈ ರತ್ನ ಹಾರದ ಅಬ್ಬರದಲ್ಲಿ ಗರ್ವಿತಳಾದ ಅವಳು ನನ್ನನ್ನು ಲೆಕ್ಕಿಸದೆ ಹೋದರೆ?...

[ ಮನಸೆಯು ಬರುವಳು ]

**ಮನಸಾ**— ಚತುರನಾದ ಕಂಬಾರನೆ, [ಕಾಳು ಮಾತಾಡದೆ ವಿಸ್ಮಯಾತಿಶಯದಿಂದ ಬಿರಿ ಬಿರಿ ನೋಡುತ್ತ ನಿಲ್ಲುವನು] ನನಗೆ ಹೆಚ್ಚು ಅವಕಾಶವಿಲ್ಲ. ನಾನು ಬೇಗನೆ ಇಲ್ಲಿಂದ ಹೋಗಬೇಕಾಗಿದೆ. ಒಂದು ಕೆಲಸಕ್ಕಾಗಿ ನಿನ್ನ ಬಳಿಗೆ ಬಂದಿರುವೆನು. [ಆದರೂ ಕಾಳು ಮಾತಾಡದೆ ಇರುವನು. ಕೊಂಚ ಭಯಗ್ರಸ್ತನೂ ಆಗಿರುವನು. ] ನಾನು ಯಾರೆಂಬದನ್ನು ನೀನು ಬಲ್ಲೆಯಾ? ಮನಸಾದೇವಿಯ ಗೆಳತಿಯು ನಾನು. ಅವಳ ಅಪ್ಪಣೆಯಂತೆ ಇಲ್ಲಿಗೆ ಬಂದಿರುವೆನು.

**ಕಾಳು**— [ಮನಸಾದೇವಿಯನ್ನುದ್ದೇಶಿಸಿ ನಮಸ್ಕರಿಸಿ] ದೇವಿಯ ಅಪ್ಪಣೆಯೇನು?

**ಮನಸಾ**— ನೀನು ರಚಿಸಿದ್ದ ಕಬ್ಬಿಣದ ಮನೆಯಲ್ಲಿ ಒಂದು ಸಣ್ಣ ಛಿದ್ರವಾಗಬೇಕು. ನಡೆ, ಬೇಗ ನಡೆ. ಈಗಿಂದೀಗಳೆ ಛಿದ್ರಮಾಡು. [ಕಾಳು ಸುಮ್ಮನಿರುವನು] ಏಕೆ, ಸುಮ್ಮನಾದೆಯಲ್ಲ! ನಾನು ಹೇಳಿದುದು ನಿನಗೆ ಕೇಳಿಸಲಿಲ್ಲವೆ? ಹೊರಡು. [ಆದರೂ ಕಾಳು ಸುಮ್ಮನಿರುವನು] ನೀನು ನಾನು ಹೇಳಿದಂತೆ ತೂತ ಮಾಡಲಾರೆಯಾ? [ಕಾಳು ಮೊದಲಿನಂತೆ ಸ್ತಬ್ಧನಾಗಿಯೆ ಇರುವನು] ಯಾಕೆ, ಮಾತಾಡಲೊಲ್ಲೆಯಲ್ಲ! ಏನನ್ನುವೆ? ಬೇಗ ಹೇಳು. [ಕಾಳು ಆಲೋಚಿಸಹತ್ತುವನು] ತಡಮಾಡಿ ಉಪಯೋಗವಿಲ್ಲ! ಬೇಗ ಮಾತಾಡು.

**ಕಾಳು**— ಈ ರತ್ನಹಾರವನ್ನು ಇನಾಮಾಗಿ ಸಂಪಾದಿಸಿದ್ದೇನೆ!

**ಮನಸಾ**— ಇದಕ್ಕಿಂತಲೂ ಬೆಲೆಯುಳ್ಳ ಹಾರವನ್ನು ನಾನು ನಿನಗೆ ಕೊಡುವೆನು. [ಕೊಡ ಹೋಗುವಳು.]

**ಕಾಳು**—[ ಕಂಪಿತನಾಗಿ ] ಒಲ್ಲೆ! ನನಗೆ ಬೇಕಿಲ್ಲ! [ಮೋರೆ ತಿರುಗಿಸುವನು]

**ಮನಸಾ**—ಒಲ್ಲೆಯಾ? [ಕಾಳು ಮಾತಾಡದಿರುವನು] ಕಾಲವಿಳಂಬವಾಗಕೂಡದು! ಏನೆಂಬುದಕ್ಕೆ ಬೇಗನೆ ಉತ್ತರ ಕೊಡು! ನೀನು ಮನಸಾದೇವಿಯ ಅಪ್ಪಣೆಯನ್ನು ಪಾಲಿಸಲೊಲ್ಲೆಯಾ?

**ಕಾಳು**—ಒಲ್ಲೆನು! ಈ ಲೋಹಗೃಹದಲ್ಲಿ ಛಿದ್ರ ಮಾಡುವ ಕೆಲಸ ನನ್ನಿಂದಾಗದು! ನಾನು ದೊರೆತ ಈ ರತ್ನಹಾರದಿಂದ ಹೀಗೆ ಹೇಳುವೆನೆಂದು ಭಾವಿಸಬೇಡ! ಸ್ವಾಮಿದ್ರೋಹವು ಮಹಾಪಾತಕವು! ನಾನು ಯಾವ ಕಾಲಕ್ಕೂ ಪ್ರಭುದ್ರೋಹದ ಮಹಾಪಾಪವನ್ನಾಚರಿಸೆನು!

**ಮನಸಾ**—ನಾನು ನಿನ್ನ ಸ್ವಾಮಿಭಕ್ತಿಯನ್ನು ಚನ್ನಾಗಿ ಪರೀಕ್ಷಿಸಬೇಕೆಂದಿರುವೆನು!

**ಕಾಳು**—ಆಗಲಿ.

**ಮನಸಾ**—ಬೇಡ! ಹಟಕ್ಕೆ ಬೀಳಬೇಡ! ಮನಸಾದೇವಿಯ ಶಕ್ತಿಯು ಸಾಮಾನ್ಯವಲ್ಲ. ಅವಳನ್ನು ವಿರೋಧಿಸಿ ಬದುಕುವುದು ಸಾಮಾನ್ಯ ಮಾನವನಾದ ನಿನಗೆ ಸಾಧ್ಯವಲ್ಲ!

**ಕಾಳು**—ಏನಾದರೂ ನಾನು ಉಂಡಮನೆಯ ಗಳ ಎಣಿಸೆನು!

**ಮನಸಾ**—ಎಲೊ, ನಿನಗೆ ಮರಣದ ಭಯವಿಲ್ಲವೆ? ಮನಸಾದೇವಿಯು ಆಜ್ಞಾಭಂಗ ಮಾಡಿದ ಅಪರಾಧಿಯಾದ ನಿನ್ನನ್ನು ಸಂಹರಿಸದೆ ಬಿಡಳು! ನಿನಗೆ ಬದುಕುವ ಆಶೆಯಿಲ್ಲವೆ? ಸ್ವಾಮಿಭಕ್ತಿಯ ಜಾಲದಲ್ಲಿ ಸಿಕ್ಕು ಪ್ರಾಣವನ್ನು ಕಳೆದುಕೊಳ್ಳಬೇಕೆಂದಿರುವೆಯಾ?

**ಕಾಳು**—ಏನಾದರೂ ಅನ್ನವಿಕ್ಕಿದವನಿಗೆ ಕೇಡು ಮಾಡಲಾರೆನು!

**ಮನಸಾ**—ಹೀಗೊ...ಆಗಲಿ... ಸರ್ಪದಂಶನದಿಂದ ಮರಣವನ್ನನುಭವಿಸು...[ದೊಡ್ಡ ಹಾವು ಕಾಣಿಸಿಕೊಳ್ಳುವದು. ಕಾಳು ಗಾಬರಿಯಾಗಿ ಚೀತ್ಕರಿಸುವನು. ಹಾವು ಕಾಳುನನ್ನು ಸುತ್ತಿಕೊಳ್ಳುವದು. ಕಾಳು ಅಚೇತನನಾಗಿ ಬಿದ್ದುಕೊಳ್ಳುವನು.] ಕಾಲರಾತ್ರಿಯಿದು. ಈ ದುಸ್ಸಮಯದಲ್ಲಿ ದೇವಮಾನವರ ಮಧ್ಯದಲ್ಲಿ ನಡೆದ ಹೋರಾಟದ ಆರಂಭದಲ್ಲಿ ನಾನು ಈ ಸ್ವಾಮಿನಿಷ್ಠನಿಂದ ಪರಾಜಿತಳಾದಂತಾಯಿತು! ಈ ಸಾಮಾನ್ಯ ಮಾನವನು ತನ್ನ ಸ್ವಾಮಿನಿಷ್ಠೆಯ ಗುಣದಿಂದ ನನ್ನನ್ನು ಸೋಲಿಸಿ ನಾನು ಅಧೋವದನೆಯಾಗುವಂತೆ ಮಾಡಿದನು! [ಎರಡೂ ಕೈಗಳಿಂದ ಮೋರೆಯನ್ನು ಮುಚ್ಚಿಕೊಳ್ಳುವಳು. ಕೆಲಹೊತ್ತಿನ ಮೇಲೆ ಮತ್ತೆ ಉತ್ತೇಜಿತಳಾಗಿ] ನಾನು ಅನುಶೋಚನೆಯನ್ನು ಹೊಂದಿ ಕಾಲ್ಕಿತ್ತರೆ ನಡೆ

ಯದು! ಮಾನವರು ತಮ್ಮ ನೈತಿಕಬಲದಿಂದ ನನ್ನ ಹೃದಯಕ್ಕೆ ಆಗಾಗ್ಗೆ ಆಘಾತ ಮಾಡುತ್ತಿರುವರಾದರೂ, ದಿವ್ಯ ಶಕ್ತಿಯುತಳಾದ ನಾನು ಪರಾಭವವನ್ನು ಒಪ್ಪಿಕೊಳ್ಳುವದು ಶರವಲ್ಲ! ನಡೆದಿದ್ದ ದೇವಮಾನವರ ಯುದ್ಧದಲ್ಲಿ ದೇವಿಯಾಗಿದ್ದ ನಾನು ಯಾವ ಬಗೆಯಿಂದಾದರೂ ಜಯಶೀಲಳಾಗಲೆ ಬೇಕು! ಎಲೊ ಕರ್ಮಾರನೆ, ಏಳು. ಇನ್ನು ನೀನು ನನ್ನ ಗುಲಾಮನು. ನಾನು ಹೇಳಿದಂತೆ ಆಚರಿಸಲಿ ಬೇಕು. [ಕಾಳುನ ಮೇಲೆ ಕೈ ಎಳೆಯುವಳು. ಮೂರ್ಛಿತನಾಗಿದ್ದ ಕಾಳು ಚೇತನೆ ಹೊಂದಿ ಎದ್ದು ನಿಲ್ಲುವನು] ಎಲೊ, ಇನ್ನು ಹೊರಡು. ಆ ಕಬ್ಬಿಣದ ಗೋಡೆಯಲ್ಲಿ ಸೂಜಿಯ ತುದಿಯಷ್ಟು ಸೂಕ್ಷ್ಮ ಛಿದ್ರವನ್ನು ಮಾಡಿಕೊಡು. [ಕಾಳು ಮನಸ್ಸಿಲ್ಲದಿದ್ದರೂ ಹೊರಡುವನು. ನೇಪಥ್ಯದಲ್ಲಿ ಮಂಗಳವಾದ್ಯಗಳ ದನಿಯಾಗುವದು. ಕಾಳು ಛಿದ್ರ ಮಾಡಿ ತಿರುಗಿ ಬರುವನು.] ನಾನು ನನ್ನ ಕೆಲಸವನ್ನು ಮಾಡಿಸಿಕೊಂಡಂತಾಯಿತು. ರಾಜಕನ್ಯೆಯು ಸಮಾರಂಭದಿಂದ ನವನಿರ್ಮಿತ ಲೋಹಗೃಹವನ್ನು ಪ್ರವೇಶಿಸುತ್ತಿರುವಳು. ಇನ್ನು ನಾನು ಇಲ್ಲಿರಲಿಕ್ಕಾಗದು! [ಹೊರಡುವದರಲ್ಲಿರುವಳು]

**ಕಾಳು**—ಒಡೆಯನೆ, ಧನಿಯನೆ, ಮಹಾಪ್ರಭುಗಳೆ... [ನೇಪಥ್ಯದ ಕಡೆಗೆ ಹೋಗುವನು]

**ಮನಸಾ**—ಇಂದಿನ ರಾತ್ರಿಯಲ್ಲಿ ನಿನ್ನ ವಾಕ್ಶಕ್ತಿಯು ಲೋಪವಾಗಲಿ... [ಚಾಂದಸವದಾಗರನು ಬರುತ್ತಿರುವದನ್ನು ಕಂಡು ಅಂತರ್ಧಾನಳಾಗುವಳು]

**ಚಾಂದ**— (ಕಾಳುನನ್ನು ನೋಡಿ) ಈ ಸಮಯದಲ್ಲಿ ನೀನು ಇಲ್ಲಿ ಏಕಿರುವೆ? ಮನೆಗೆ ಹೋಗಲಿಲ್ಲವೇಕೆ? (ಕಾಳು ಮಾತಾಡಲಿಕ್ಕೆ ಪ್ರಯತ್ನಿಸಿದನು. ನಿಷ್ಫಲ ಮನೋರಥನಾಗಿ ಹುಚ್ಚನಂತೆ ಚಾಂದನನ್ನು ನೋಡುತ್ತ ನಿಂತನು) ಏನಾಯಿತು? ಹೀಗೇಕೆ ಮಾಡುತ್ತಿರುವೆ? (ಕಾಳು ಮಾತಾಡಲಿಕ್ಕೆ ನಿಷ್ಫಲ ಪ್ರಯತ್ನಮಾಡುವನು. ಕೊನೆಯಲ್ಲಿ ಚಾಂದನನ್ನು ಕರೆದೊಯ್ದು ಛಿದ್ರವನ್ನು ತೋರಿಸುವ ಪ್ರಯತ್ನಕ್ಕೆ ತೊಡಗಿದನು.) ನಾನು ಕೊಟ್ಟಿರುವ ರತ್ನಹಾರದಿಂದ ಬಹು ಆನಂದಿತನಾಗಿ ಮಿತಿಮೀರಿ ಸುರಾಪಾನ ಮಾಡಿರುವೆ. ಸುರೆಯ ಮದದಿಂದ ಎಚ್ಚರದಪ್ಪಿ ಉನ್ಮಾದನಂತೆ ಆಚರಿಸುತ್ತಿರುವೆ. ನಾನು ನಿನ್ನ ರಾಜನು. ದೂರ ಸರಿದು ನಿಲ್ಲು— ಮೈಕೈ ಮುಟ್ಟಬರಬೇಡ! (ಕಾಳುವಿನ ಕೈಯೊಳಗಿಂದ ಕೈ

ಕೊಸರಿಕೊಳ್ಳುವನು. ನೇಪಥ್ಯದಲ್ಲಿ ಮತ್ತೆ ಮಂಗಳವಾದ್ಯಗಳ ಸ್ವರವಾಗುವದು. ಕಾಳು ಮತ್ತಷ್ಟು ಗಾಬರಿಯಾಗುವನು.) ಮಗನೂ ಸೊಸೆಯೂ ಅಂತಃಪುರದ ರಮಣಿಯರಿಂದ ಪರಿವೃತರಾಗಿ ಶಯ್ಯಾಗೃಹವನ್ನು ಪ್ರವೇಶಿಸುತ್ತಿರುವರು. ಹೋಗಲಿ, ಪ್ರಥಮ ಮೀಲನದ ಆನಂದವನ್ನು ಯಥೇಚ್ಛವಾಗಿ ಅನುಭವಿಸಲಿ. ಭಯಕ್ಕೆ ತಿಲಪ್ರಾಯವೂ ಎಡೆಯಿಲ್ಲ. ಅಖಂಡವಾದ ಕಬ್ಬಿಣದ ಮನೆ ಸುತ್ತಲೂ ಶಸ್ತ್ರಧಾರಿಗಳಾದ ಪ್ರಹರಿಗಳು ನಾನಂತೂ ಚಿರಜಾಗ್ರತನಾಗಿ ಕಾಯುತ್ತಿರುವೆನು.

(ಪುರನಾರಿಯರಿಂದ ಪರಿವೃತರಾದ ದಂಪತಿಗಳು ಬಂದು ಚಾಂದನಿಗೆ ನಮಸ್ಕರಿಸುವರು. ಚಾಂದನು ಆಶೀರ್ವಾದ ಮಾಡುವನು.)

**ಚಾಂದ—** (ಮೇಲಕ್ಕೆ ಮೋರೆಮಾಡಿ) ಪರಮೇಶ್ವರನೆ ಅನುಗ್ರಹಿಸು ಈ ನವದಂಪತಿಗಳು ಬಹುದಿವಸ ಬಾಳುವಂತೆ ಆಶೀರ್ವದಿಸು.

(ಪುರಮಹಿಳೆಯರು ದಂಪತಿಗಳನ್ನು ಕರೆದುಕೊಂಡು ಒಳಗೆ ಹೋಗುವದರಲ್ಲಿದ್ದರು. ಕಾಳು ಓಡಿಬಂದು ಅಡ್ಡಬಿದ್ದು ದಂಪತಿಗಳ ಗಮನವನ್ನು ತಡೆದನು.)

**ಚಾಂದ—**(ಸೇವಕರನ್ನುದ್ದೇಶಿಸಿ) ಈ ಸೆರೆಗುಡಕನನ್ನು ಇಲ್ಲಿಂದ ಹೊರಡಿಸಿಕೊಂಡು ಹೋಗಿರಿ! ಮಂಗಳಕಾರ್ಯದಲ್ಲಿ ಅಮಂಗಳವನ್ನು ಸೂಚಿಸುತ್ತಿರುವ ಇವನ ಅಪರಾಧದ ವಿಚಾರಣೆಯನ್ನು ನಾಳಿನ ದಿವಸ ಮಾಡುವೆನು!

(ಸೇವಕರು ಕಾಳುವನ್ನು ಸರಿಸಿದರು. ನಾಗರಿಕ ನಾರಿಯರೂ ದಂಪತಿಗಳೂ ಒಳಗೆ ಹೋದರು. ಕಾಳು ಸೇವಕರ ಕೈಯಿಂದ ಪಾರಾಗಿ ಬಂದು ಚಾಂದನ ಪಾದಗಳ ಮೇಲೆ ಬಿದ್ದು ಹೊರಳಾಡಹತ್ತಿದನು. ಚಾಂದನು ಉಪೇಕ್ಷೆಯಿಂದ ದೂರಸಾರಿದು ನಿಂತು ಉತ್ತೇಜಿತನಾಗಿ ಯೋಚನೆಮಾಡಹತ್ತಿದನು. ಪುರಮಹಿಳೆಯರು ಶಯ್ಯಾಗೃಹದಲ್ಲಿಯ ಕಾರ್ಯವನ್ನು ತೀರಿಸಿಕೊಂಡು ಹೊರಬಿದ್ದು ಹೋಗುವರು).

**ಚಾಂದ—** ಕುರುಡ ಮನಸೆಯೆ, ಇನ್ನು ನಾನು ನಿನಗೆ ನಿಮಂತ್ರಣವನ್ನು ಕೊಡುವೆನು! ಬಾ. ನನ್ನ ಈ ವ್ಯವಸ್ಥೆಯನ್ನು ನೋಡಿಕೊಂಡು ನಿಷ್ಫಲ ಮನೋರಥಳಾಗಿ ಚಡಪಡಿಸು! ಇದಿನಿಮವರೆಗೆ ಸುಮ್ಮನೆ ಕುಳಿತಿರಲಿಕ್ಕಿಲ್ಲ! ಉದ್ದೇಶಸಿದ್ಧಿಗಾಗಿ ನೂರಾರು ಹಾವುಗಳನ್ನು ಕಳುಹಿಕೊಟ್ಟಿರಬಹುದು! ಆದರೆ ಆ ಹಾವುಗಳ ಆಟವು ಇಲ್ಲಿ ಹೇಗೆ ನಡೆಯಬೇಕು? ಅವು ಕೃತಕಾರ್ಯಗಳಾಗದೆ ಒಡೆಯಳ ಹಿತವನ್ನು ಸಾಧಿಸಲಾರದವುಗಳಾಗಿ—ವ್ಯರ್ಥವಾಗಿ ಧಡಪಡಿಸುತ್ತಿರು

ಬಹುದು ! ನೀನು ನಿನ್ನ ಆ ಅನುಯಾಯಿಗಳ ದುರ್ದಶೆಯನ್ನು ನೋಡಿಕೊಳ್ಳು ! ಈ ಚಾಂದಸೌದಾಗರನೊಡನೆ ಹಟತೊಟ್ಟಿದ್ದಕ್ಕಾಗಿ ಪಶ್ಚಾತಾಪಪಡು ! ಜಯ ಶಂಭು ! ಹರಹರಮಹಾದೇವ !

(ಕಾಳು ಎದ್ದು ಚಾಂದನ ಹತ್ತಿರ ಬರುವನು. ಕಬ್ಬಿಣದ ಮನೆಯು ನಿರಾಪದವಾಗಿಲ್ಲವೆಂಬದನ್ನು ಸನ್ನೆಯಿಂದ ತಿಳಿಸಲಿಕ್ಕೆ ಪ್ರಯತ್ನಿಸುವನು.)

**ಚಾಂದ**— ಪ್ರತಿಹಾರಿ, (ಒಬ್ಬ ಸೇವಕನು ಬರುವನು) ಇವನು ಬಹಳವಾಗಿ ಸೆರೆಗುಡಿದು ಮೈಮೇಲೆ ಪ್ರತಿಜ್ಞೆಯಿಲ್ಲದವನಾಗಿದ್ದಾನೆ. ಇವನನ್ನು ಎಳೆದುಕೊಂಡು ಹೋಗಿ, ಇವನ ಮನೆಯಲ್ಲಿರಿಸಿ ಬಾ. (ಸೇವಕನು ಕಾಳೂನನ್ನು ದೂಡಿಕೊಂಡು ಹೊಗುವನು. ಅಂತರಿಕ್ಷದಲ್ಲಿ ಎದ್ದ ಅಟ್ಟಹಾಸ್ಯದ ಸ್ವರವು ಕೇಳುವದು. ಚಾಂದನಿಗೆ ಸಾವಿರಾರು ಜನರು ಒಮ್ಮೆಲೆ ಗಹಗಹಿಸಿ ನಗುತ್ತಿರುವಂತೆ ಭಾಸವಾಗುವದು. ಚಾಂದನು ಚಮಕಿತನಾಗಿ ಅತ್ತಿತ್ತ ನೋಡುವನು. ಕೆಲ ಹೊತ್ತಿನಮೇಲೆ ಮತ್ತೆ ಕೆಲಮಟ್ಟಿಗೆ ಶಾಂತನಾಗುವದು.) ಕೇಳಬಂದ ಅಟ್ಟಹಾಸವು ನನ್ನ ಉತ್ತೇಜಿತ ಮಸ್ತಿಷ್ಕದ ಆಟವಲ್ಲದೆ ನಿಜವಲ್ಲ! ಜಯಶಂಭು ! ಹರಹರ ಮಹಾದೇವ!

( ಮೋರೆಯ ಬೆವರನ್ನೊರಿಸಿಕೊಳ್ಳುವನು. ಸತರ್ಕದೃಷ್ಟಿಯಿಂದ ಕಾಯುತ್ತ ನಿಲ್ಲುವನು.)

( ಶಯ್ಯಾಗೃಹದಲ್ಲಿ )

**ಲಕ್ಷ್ಮೀಂದರ**—ಪ್ರಿಯೇ, ಇಲ್ಲಿ ಬಾ. ಕುಳಿತುಕೊಳ್ಳು, ನಿನ್ನ ಈ ಹಾವಿನ ಹೆರಳು ನನಗೆ ಸೇರದು. ಭಯವನ್ನುಂಟು ಮಾಡುತ್ತಿರುವದು ! ನಾನಿದನ್ನು ಬಿಚ್ಚಿ ಬೇರೆ ವಿಧದ ಹೆರಳ ಹಾಕುವೆನು !

**ಬೇಹುಳಿ**— ಭಯವೇತರದು ? ಹಾವಿಗೆ ಹೆದರುವಿರಾ ?

**ಲಕ್ಷ್ಮೀಂದರ**— ಅಹುದು. ನಾನು ಹಾವಿಗೆ ಹೆದರುತ್ತಿರುವೆನು. ಮರಣದ ಭಯವು ನನಗಿರಲಿಲ್ಲ, ಆದರೆ ಇಂದು ನಿನ್ನ ಸಹವಾಸದಿಂದ ವಂಚಿತನಾಗಬಾರದೆಂಬ ಉತ್ಕಟಾಶೆಯಿಂದ ಸರ್ಪದಂಶನಕ್ಕೆ ಭಯಗೊಂಡಿರುವೆನು !

**ಬೇಹುಳಿ**— ಪ್ರಿಯತಮ, ಹೆದರ ಬೇಡಿರಿ. ನಿರ್ಧಾಸ್ತರಾಗಿರಿ. ನಾನು ಬೆಳತನಕ ಎದ್ದು ಕುಳಿತು ಕಾಯುತ್ತಿರುವೆನು. ಹಾವು ಬಂದೊಡನೆಯೆ ನಾಚು

ವೆನು. ಅದು ನನ್ನ ನರ್ತನದಿಂದ ಕೈವಶವಾಗಿ ಹೋಗುವದು. ಎಲ್ಲ ಪ್ರಾಣಿಗಳಿಗಿಂತ ಹಾವುಗಳು ಗಾಯನ-ನರ್ತನಗಳ ಸ್ವಾರಸ್ಯವನ್ನು ಹೆಚ್ಚಾಗಿ ತಿಳಿದಿವೆ. ಇವುಗಳಿಗೆ ಮೋಹವನ್ನುಂಟುಮಾಡುವ ಗಾಯನ-ನರ್ತನಗಳನ್ನು ಮಾಡಬಲ್ಲ ನಾನು ನಿಮ್ಮ ಚರಣ ಸನ್ನಿಧಿಯಲ್ಲಿದ್ದ ಬಳಿಕ ನೀವು ಭಯಗೊಳ್ಳುವ ಕಾರಣವಿಲ್ಲ.

**ಲಕ್ಷ್ಮೀಂದರ**— ಬೆಳಗಾಗುವವರೆಗೂ ಜಾಗರಣೆಮಾಡುವೆಯಾ?

**ಬೇಹುಳಿ**— ಜಾಗರಣೆಮಾಡಲಿಕ್ಕೇ ಬೇಕಾಗಿದೆ! ನೀವು ಸರ್ಪದಂಶನ ಭಯದಿಂದ ಕಾತರರಾಗಿರುವಿರಿ. ನಾನು ಬೆಳತನಕ ಎಚ್ಚತ್ತಿದ್ದು ನಿಮ್ಮ ರಕ್ಷಣೆ ಮಾಡಬೇಕಾಗಿದೆ. ಬೇಕಾದರೆ, ನೀವೂ ನನ್ನೊಡನೆ ಜಾಗರಣೆಮಾಡಬಹುದು. ನಾವಿಬ್ಬರೂ ಸರಸಸಲ್ಲಾಪಗಳನ್ನಾಡುತ್ತ ಇಂದಿನ ರಾತ್ರಿಯನ್ನು ಕಳೆಯುವದು ಹಿತವಲ್ಲವೆ?

**ಲಕ್ಷ್ಮೀಂದರ**— ಏಕೊ ನನಗೆ ನಿದ್ದೆಬಂದಂತಾಗಿದೆ. ಕಣ್ಣು ಮುಚ್ಚುವವಲ್ಲಿವೆ. ನಾನು ಬೆಳತನಕ ಎದ್ದು ಕುಳ್ಳಿರಲಾರೆನು. (ಒರಗಿಕೊಳ್ಳುವನು)

**ಬೇಹುಳಿ**—ನಾನು ಕಥೆಗಳನ್ನು ಹೇಳುವೆನು. ಕೇಳುತ್ತ ಜಾಗ್ರತರಾಗಿರಿ.

**ಲಕ್ಷ್ಮೀಂದರ**— ನಾನೊಲ್ಲೆನು. ಕಥೆಗಳನ್ನು ಕೇಳಹತ್ತಿದರೆ, ನನ್ನ ನಿದ್ದೆಯು ಇಮ್ಮಡಿಸುವದು. ಗಾಯನಮಾಡು—ಕೇಳುವೆನು. ನರ್ತನಮಾಡು—ನೋಡುವೆನು.

**ಬೇಹುಳಿ**—ಇಂದಿನರಾತ್ರಿಯಲ್ಲಿ ಈ ಸ್ಥಳದಲ್ಲಿ ನೃತ್ಯಗೀತಗಳನ್ನು ಮಾಡಿದರೆ ಜನರು ಏನೆಂದಾರು? ನನಗೆ ನಾಚಿಕೆಯಾಗುತ್ತಿದೆ!

**ಲಕ್ಷ್ಮೀಂದರ**— ಬೇಡಾದರೆ ಬಿಡು. ನಾನು ಆಗ್ರಹಪಡಿಸುವದಿಲ್ಲ. ನನಗೆ ಬಹಳ ನಿದ್ದೆಬಂದಿದೆ. ನೀನೂ ಬಾ. ಇಬ್ಬರೂ ಮಲಗಿಕೊಳ್ಳೋಣ. ನಿನಗೆ ನಿದ್ದೆಬಂದಿಲ್ಲವೆ? ನಿನ್ನ ಈ ಇಂದೀವರ ಸದೃಶ್ಯನೇತ್ರಗಳಲ್ಲಿ ನಿದ್ರೆಯೆ ಇಲ್ಲ! ನಾನು ಮಲಗುವೆನು. (ಮಲಗುವನು)

**ಬೇಹುಳಿ**— ಮಲಗಬೇಡಿರಿ. ಏಳಿರಿ. ನಾನು ಹಾಡುವೆನು. ಕುಣಿಯುವೆನು. ನಿಮ್ಮ ಎಲ್ಲ ಆಕಾಂಕ್ಷೆಗಳನ್ನು ಪೂರಯಿಸುವದು ನನ್ನ ಕರ್ತವ್ಯವು. ನಿಮ್ಮ

ಆಜ್ಞೆಯನ್ನು ಮೀರದಿರುವದು ನನ್ನ ಧರ್ಮವು. ನನ್ನ ನೃತ್ಯಗೀತಗಳಿಂದ ಆನಂದವು ನಿಮಗಾಗುತ್ತಿದ್ದರೆ, ನಾನು ಸಂತೋಷದಿಂದ ಗಾಯನ-ನರ್ತನಗಳನ್ನು ಮಾಡುವೆನು. ಹೀಗೆ ಮಲಗಬೇಡಿರಿ. ಎದ್ದು ಕುಳಿತುಕೊಳ್ಳಿರಿ.

**ಲಕ್ಷ್ಮೀಂದರ**— (ಎಚ್ಚತ್ತು) ನಿನ್ನನ ರಾತ್ರಿಯ ಬೆಳಗಿನಜಾವದಲ್ಲಿ ನನಗೊಂದು ಕನಸುಬಿದ್ದಿತ್ತು. ಅದು ಈಗ ತಾನೇ ತಾನಾಗಿ ನೆನಪಾಗಿದೆ. ಹೇಳಲಿಯಾ ?

**ಬೇಹುಳೆ**— ಹೇಳಿರಿ.

**ಲಕ್ಷ್ಮೀಂದರ**—ನೀನು ಹೆಣ್ಣು ನವಿಲಾಗಿದ್ದೆ. ನಾನು ಗಂಡುನವಿಲಾಗಿ ನಿನ್ನ ಬಳಿಯಲ್ಲಿದ್ದೆನು. ನೀನು ಆಗಸದಲ್ಲಿಯ ಮೋಡದಲ್ಲಿ ಕಾಣುತ್ತಿದ್ದ ಇಂದ್ರಧನುಷ್ಯವನ್ನು ನೋಡಿ ಆನಂದಾತಿಶಯದಿಂದ ತಲ್ಲೀನಳಾಗಿ ಕುಣಿಯುತ್ತಿದ್ದೆ. ನಾನು ಮೈಮರೆದು ನಿಂತು ನಿನ್ನ ಕುಣಿತವನ್ನು ನೋಡುತ್ತಿದ್ದೆನು. ಬೇಡನೊಬ್ಬನು ಅಕಸ್ಮಾತ್ತಾಗಿ ಕಾಣಿಸಿಕೊಂಡು, ನನಗೆ ಬಾಣವನ್ನು ಪ್ರಯೋಗಿಸಿದನು. ನೀನು ಪಲಾಯನಮಾಡಿದೆ. ವ್ಯಾಧನ ಬಾಣಪ್ರಹಾರದಿಂದ ಪ್ರಾಣಬಿಡುವದರಲ್ಲಿದ್ದ ನನ್ನ ಬಳಿಗೆ ನೀನು ಮತ್ತೆ ಬಂದೆ. ನಾನು ಓಡಿಹೋಗೆಂದು ಬಹುಪರಿಯಾಗಿ ಹೇಳಿದರೂ ನೀನು ಕೇಳಲಿಲ್ಲ. ನೀನು ಕಾತರತೆಯಿಂದ ನನ್ನ ಮೈಮೇಲೆ ಬಿದ್ದುಬಿಟ್ಟೆ. ಬೇಡನು ನಿನ್ನನ್ನು ಎಳೆದುಕೊಂಡು ಹೋಗಿಬಿಟ್ಟನು. ಪ್ರಾಣಾಂತ್ಯಸಮಯದಲ್ಲಿ ನಾನು ಚೀತ್ಕಾರಮಾಡಿದೆನು. ಸ್ವಪ್ನಭಂಗವಾಗಿ ಹೋಯಿತು.

**ಬೇಹುಳೆ**— ಪ್ರಿಯತಮ, ನಿನ್ನೆ ರಾತ್ರಿಯಲ್ಲಿ ನಾನೂ ಒಂದು ಕನಸ ಕಂಡೆನು. ಅದೂ ನಿಮ್ಮ ಕನಸಿನಂತೆಯೆ ಅದ್ಭುತವಾದ್ದು. ಹೇಳಲೇನು ?

**ಲಕ್ಷ್ಮೀಂದರ**— ಆಗಲಿ, ಹೇಳು.

**ಬೇಹುಳೆ** — ನೀವು ಅಯೋಧ್ಯೆಯ ನಟರಾಜರಾಗಿದ್ದಿರಿ. ನಾನು ಗಂಧರ್ವಕುಮಾರಿಯಾಗಿದ್ದೆನು. ನಾನು ನಿಮ್ಮ ಅಭಿನಯವನ್ನು ನೋಡಿ ಮೋಹಿತಳಾಗಿ ದಿನಾಲು ರಾತ್ರಿಯಲ್ಲಿ ಗಂಧರ್ವನಗರವನ್ನುಬಿಟ್ಟು ಅಯೋಧ್ಯೆಯ ನಾಟ್ಯಶಾಲೆಗೆ ಬರುತ್ತಿದ್ದೆನು. ಹುಚ್ಚಿಯಂತೆ ನಿಮ್ಮ ಮುಖವನ್ನು ನೋಡುತ್ತ ಕುಳ್ಳಿರುತ್ತಿದ್ದೆನು. ಈ ಸಂಗತಿಯು ನನ್ನ ತಂದೆಗೆ ತಿಳಿಯಿತು. ಅವನು ಕುಪಿತ

ನಾಗಿ ಬಂದು ನಿಮಗೆ ಬಾಣಪ್ರಯೋಗಮಾಡಿದನು. ನಿಮ್ಮ ದೇಹದಿಂದ ರಕ್ತದ ಕಾರಂಜಿಯು ಹೊರಚಿಮ್ಮಹತ್ತಿತು. ನಾನು ಹಾಹಾಕಾರದವಳಾಗಿ ನಿಮ್ಮ ಎದೆಯಮೇಲೆ ಬಿದ್ದುಬಿಟ್ಟೆನು. ರಕ್ತದ ಕಾರಂಜಿಯು ನನ್ನ ಹಣೆಗೆ ಈ ತಿಲಕ ವನ್ನಿಟ್ಟದೆ. ಇಂದು ಮುಂಜಾವಿನಲ್ಲಿ ಈ ತಿಲಕವನ್ನಳುಕಿಸಿಕೊಳ್ಳಲಿಕ್ಕೆ ಬಹಳ ವಾಗಿ ಯತ್ನಿಸಿದೆನು. ಏನು ಮಾಡಿದರೂ ಹೋಗಲಿಲ್ಲ.

**ಲಕ್ಷ್ಮೀಂದರ—** ಅದು ನಾನು ಹಚ್ಚಿದ ತಿಲಕ. ನನ್ನ ಎದೆಯ ರಕ್ತದ ತಿಲಕ. ಹೋಗುವದಲ್ಲ. ನನ್ನ ಪ್ರೇಮವು ಪವಿತ್ರತಮವಾಗಿದ್ದಲ್ಲಿ ಅದು ಎಂದೂ ಅಳುಕದು. ನನ್ನ ದಿವ್ಯಪ್ರೇಮದ ದ್ಯೋತಕವಾಗಿ ಎಂದೆಂದಿಗೂ ಹೀಗೆಯೆ ಇರು ವದು. ( ಮತ್ತೆ ಮಲಗುವನು )

**ಬೇಹುಳೆ—** ಮತ್ತೆ ಮಲಗಿದಿರಲ್ಲ! ಮಲಗಬೇಡಿರಿ. ಏಳಿರಿ. ಹೊರಗೆ ಚಂದ್ರಮನುದಿಸಿರಬಹುದು. ಉದ್ಯಾನದ ಪುಷ್ಪಗಳು ಅರಳುತ್ತಿದ್ದು ಸುವಾಸನೆ ಯನ್ನು ಹರಡಿರಬಹುದು. ( ಅತ್ತಿತ್ತ ನೋಡಿ ಚಮಕಿತಳಾಗಿ ) ಆ ಗೋಡೆ ಯಲ್ಲಿ ಅದೇನು ? ಹಾವು !.........ಓಹೊ, ಈ ಹಾವಿಗೆ ನಾನೇಕೆ ಹೆದರಬೇಕು? ಅಹೀರಾಜನೆ, ನೀನಿಲ್ಲಿಗೇತಕ್ಕೆ ಬಂದೆಯಣ್ಣಾ ? ಇಲ್ಲಿ ನಿನ್ನ ಕೆಲಸವೇನಿತ್ತು ? ದಂಪತಿಗಳ ಪ್ರಥಮ ಮಿಲನದ ಈ ಶುಭರಾತ್ರಿಯಲ್ಲಿ, ಏಕಾಂತಗೃಹದಲ್ಲಿ ನಿನ್ನ ಕೆಲಸವಿರಲಿಲ್ಲವಣ್ಣಾ ! ನಾನು ಪತಿದೇವರ ಆಜ್ಞೆಯಂತೆ ನೃತ್ಯಗೀತಗಳನ್ನಾರಂ ಭಿಸಬೇಕೆಂದಿದ್ದೆ. ನೀನು ನನ್ನ ಆ ನೃತ್ಯವನ್ನು ನೋಡಲಿಕ್ಕೆ ಬಂದಿರಬಹುದು. ಓಾ. ( ಹಾವು ಕೆಳಗಿಳಿದು ಬಂದಿತ್ತು ) ಹಸಿದಿರುವೆಯಾದೀತು. ಮೊದಲು ಏನಾದರೂ ತಿಂದು ಶಾಂತನಾಗು. ಇದೊ, ಇಲ್ಲಿ ಹಾಲಿನ ಬಟ್ಟಲವಿದೆ—— ( ಹಾವಿನಮುಂದೆ ಹಾಲಿನ ಬಟ್ಟಲವನ್ನಿಡುವಳು. ಹಾವು ಹಾಲ ಕುಡಿಯಹತ್ತು ತ್ತಲೆ, ಅದನ್ನೊಂದು ಚೀಲದಲ್ಲಿ ಪ್ರತಿಬಂಧಿಸುವಳು. ) ಸಿಟ್ಟಾಗಬೇಡಣ್ಣಾ ! ಶಾಂತಚಿತ್ತನಾಗಿ ಕೆಲಕಾಲ ನಿದ್ರಿಸು. ನೀನು ನಿದ್ದೆಯಿಂದೇಳುತ್ತಲೆ ಮುಕ್ತ ನಾಗುವೆ. ಆಗ ನಾನು ನಿನ್ನೆದುರಿನಲ್ಲಿ ಕುಣಿಯಹತ್ತುವೆನು. ನೀನೂ ಹೆಡೆಯ ನ್ನೆತ್ತಿ ನನ್ನೊಡನೆ ಕುಣಿಯುವಿಯಂತೆ. ಅಣ್ಣಾ, ಮತ್ತೊಂದು ಮಾತ ಹೇಳು ವೆನು. ನೆನಪಿನಲ್ಲಿಟ್ಟುಕೊ. ಇವರು ನನ್ನ ಪತಿರಾಯರು. ಪುಕ್ಕರು. ನಿನಗೆ ಬಹಳವಾಗಿ ಹೆದರುವರು. ನೀನು ಇವರಿಗೆ ಭಯದೋರಬೇಡ. ನನ್ನನ್ನು ಪ್ರೀತಿಸು

ತ್ತಿರುವ ನೀನು ನನ್ನ ಪ್ರಿಯತಮರಿಗೆ ಭಯದೋರುವದು ಸರಿಯಾದೀತೆ ? ಇನ್ನು ಮಾತು ಸಾಕು. ನನಗೂ ನಿದ್ದೆ ಬಂದಿದೆ. ನಾನು ಇಂದಿನ ಈ ಶುಭರಾತ್ರಿಯಲ್ಲಿ ಪತಿಯ ಆಲಿಂಗನ ಸುಖದಲ್ಲಿ ನಿದ್ರಿಸಬೇಕಾಗಿದೆ. ನೀನು ಎಡಚು ಮಾಡಬೇಡ. ಸುಮ್ಮನೆ ಮಲಗಿಕೊಳ್ಳು. ( ಮುಗ್ಧ ದೃಷ್ಟಿಯಿಂದ ಕ್ಷಣಕಾಲ ಪತಿಯ ಮುಖದ ಕಡೆಗೆ ನೋಡುವಳು. ಬಳಿಕ ಪತಿಯ ಪಕ್ಕದಲ್ಲಿ ಮಲಗುವ ಸನ್ನಾಹದಲ್ಲಿರುವಳು. ಇಷ್ಟರಲ್ಲಿ ಮತ್ತೊಂದು ಹಾವು ಕಾಣುವದು. ಸರಸರನೆ ಬಂದು ಲಕ್ಷ್ಮೀಂದರನ ಕಾಲ ಹತ್ತಿರ ನಿಲ್ಲುವದು.) ಅಯ್ಯೋ, ಮತ್ತೊಂದು ಹಾವು ಬಂದಿತಲ್ಲ! ಇವನನ್ನೂ ಪ್ರತಿಬಂಧಿಸಲಿಕ್ಕೆ ಬೇಕು ! ಏನಯ್ಯಾ, ಉರಗ ರಾಜನೆ, ಈ ಸಮಯದಲ್ಲಿ ನೀನೇತಕ್ಕೆ ಇಲ್ಲಿಗೆ ಬಂದೆ ? ಇಂದಿನ ರಾತ್ರಿಯ ಸುಖವು ನನಗೆ ದೊರೆಯಬಾರದೆಂದೇ ನೀವೆಲ್ಲರೂ ಒಳಸಂಚು ನಡಿಸಿರುವಿರಾ ? ಇಲ್ಲವಾದರೆ ಒಬ್ಬೊಬ್ಬನಾಗಿ ಹೀಗೇಕೆ ಬರಹತ್ತಿರುವಿರಿ ? ಬಹು ದುಷ್ಟರು ನೀವು ! ದಂಪತಿಗಳ ಪ್ರಥಮ ಮಿಲನದ ಈ ಏಕಾಂತ ಸ್ಥಳದಲ್ಲಿ ಅನ್ಯರ ಆಗಮನಕ್ಕೆ ಅವಕಾಶವಿಲ್ಲ ! ಅವಿವೇಚಕನಾದ ನೀನು ಬಂದಿರುವೆಯೆಂದ ಬಳಿಕ ನಾನು ನಿನ್ನ ಆದರಾತಿಥ್ಯವನ್ನು ಮಾಡಲೆ ಬೇಕು! ( ಮೊದಲಿನ ಹಾವಿನಂತೆ ಈ ಹಾವನ್ನೂ ಪ್ರತಿಬಂಧಿಸುವಳು. ) ಇನ್ನು ನೀನು ಮಲಗಿಕೊಳ್ಳಬೇಕಯ್ಯಾ ! ಹಟಮಾಡದೆ ಸುಮ್ಮನೆ ಮಲಗು ! ನಾನೂ ನಿದ್ರಿಸುವೆನು... ನಾನು ಹೇಗೆ ಮಲಗಿಕೊಳ್ಳಲಿ ? ಒಂದರ ತರುವಾಯ ಮತ್ತೊಂದು ಹಾವು ಬಂತು. ಇನ್ನೊಂದು ಬರಲಿಕ್ಕಿಲ್ಲೆಂದು ಯಾರು ಹೇಳಬೇಕು ? ಇವರಂತೂ ಮಹಾಪುಕ್ಕರು. ನಾನಿವರ ರಕ್ಷಣೆಗಾಗಿ ಬೆಳಗಿನ ವರೆಗೆ ಎಚ್ಚತ್ತಿರಲೇಬೇಕು. ಹೇಗಾದರೂ ಮಾಡಿ ಇಂದಿನ ರಾತ್ರಿಯನ್ನು ಜಾಗರಣೆಯಿಂದ ಕಳೆಯಲೇ ಬೇಕು. ( ಒತ್ತರಿಸಿ ಬರಹತ್ತಿದ್ದ ನಿದ್ದೆಯನ್ನು ತಡೆಯುವದಕ್ಕಾಗಿ ಪ್ರಯತ್ನಿಸುವಳು. )

( ಹೊರಭಾಗದಲ್ಲಿ )

**ಚಾಂದ:—** ಎಷ್ಟು ರಾತ್ರಿಯಾಗಿರಬಹುದು ? ದೀರ್ಘ ರಜನಿಯಿದು ! ಎಷ್ಟು ನಿರೀಕ್ಷಿಸಿದರೂ ಬೆಳಗಾಗಲೊಲ್ಲದು ! ಇನ್ನು ನಾನು ನಿದ್ದೆಯನ್ನು ತಡೆಯದಾಗಿರುವೆನು! ನಿದ್ದೆಯ ಮಬ್ಬಿನಿಂದ ಕಣ್ಣು ಮುಚ್ಚುತ್ತಿವೆ ! ಏನು ಮಾಡಲಿ ? ಇಂದಿನ ರಾತ್ರಿಯ ಕಾವಲಿನ ಕೆಲಸವನ್ನು ಹೇಗೆ ಸರಿಯಾಗಿ ಕಡೆಹಾಯಿಸಲಿ ?

ದೇವಾಧಿದೇವನಾದ ಮಹಾದೇವನೆ, ನಿನ್ನ ದಿವ್ಯಶಕ್ತಿಯು ಕಿಂಚಿದಂಶವನ್ನಾದರೂ ನನಗೆ ದಯಪಾಲಿಸು! ನಾನು ಆ ಶಕ್ತಿಯ ಬಲದಿಂದ ನಿದ್ದೆಯೊಡನೆ ಹೋರಾಡಿ ಜಯಶಾಲಿಯಾಗುವೆನು! ಕರ್ತವ್ಯವನ್ನು ದಕ್ಷತೆಯಿಂದ ಮಾಡಿ ಕಡೆಗಾಣಿಸು ವೆನು! (ಬಂದ ನಿದ್ದೆಯನ್ನು ಹೋಗಲಾಡಿಸಿಕೊಳ್ಳಲಿಕ್ಕೆ ಧಡಪಡಿಸಿ, ಕೃತ ಕಾರ್ಯನಾಗದೆ ತೂಕಡಿಸ ಹತ್ತುವನು.)

(ಕಾಳು ಕಳ್ಳನಂತೆ ಸಾವಧಾನತೆಯಿಂದ ಬರುವನು. ಚಾಂದ ಸವದಾ ಗರನು ತೂಕಡಿಸುತ್ತಿರುವದನ್ನು ನೋಡುವನು. ಕಬ್ಬಿಣದ ಮನೆಯ ಕಡೆಗೆ ನಿರೀಕ್ಷಿಸಿ, ಮಾಳಿಗೆಯಿಂದ ಹಾವು ಇಳಿದು ಬರುತ್ತಿರುವದನ್ನು ಕಾಣುವನು. ಅದು ಭರದಿಂದ ಹೋಗಿ ಛಿದ್ರ ಮಾರ್ಗದಿಂದ ಶಯ್ಯಾಗೃಹದಲ್ಲಿ ಪ್ರವೇಶಿಸಿದರೆ ಮಹಾನರ್ಥವೊದಗದಿರದೆಂದು ಶಂಕಿಸಿದನು. ಕಾಳು ಭರದಿಂದ ಹೋಗಿ ಛಿದ್ರ ವನ್ನು ತನ್ನ ಕೈಯಿಂದ ಮುಚ್ಚಿಕೊಂಡು ನಿಂತನು. ಹಾವು ಛಿದ್ರದ ಕಡೆಗೆ ಒರುತ್ತಲಿತ್ತು. ಕಾಳುವಿನ ತಲೆಯ ಮೇಲೆ ಬಂದಿತು. ಆದರೂ ಕಾಳು ಆ ಸ್ಥಳದಿಂದ ಕದಲಲಿಲ್ಲ. ಹಾವು ಕಚ್ಚಿಬಿಟ್ಟಿತು. ಕಾಳು ನೆಲಕ್ಕೆ ಬಿದ್ದುಬಿಟ್ಟನು. ಹಾವು ಛಿದ್ರ ಮಾರ್ಗವಾಗಿ ಒಳಹೊಕ್ಕಿತು. ಕಾಳು ಮತ್ತೆ ಏಳಲಿಕ್ಕೆ ಯತ್ನಿಸಿ ದನು. ಬೀಳುತ್ತೇಳುತ್ತ ಸಾಗಿ ಚಾಂದನ ಬಳಿಗೆ ಹೋದನು. ಚಾಂದನನ್ನು ಎಬ್ಬಿಸಲಿಕ್ಕೆ ಬಹಳವಾಗಿ ಯತ್ನಿಸಿದನು. ಆದರೆ ಚಾಂದನು ಏಳಲಿಲ್ಲ. ಕಾಳು ನಿಷ್ಫಲ ಪ್ರಯತ್ನನಾಗಿ ಅಲ್ಲಿಯೆ ಬಿದ್ದು ಪ್ರಾಣಬಿಟ್ಟನು.)

(ಶಯ್ಯಾಗೃಹದಲ್ಲಿ)

(ಹಾವು ಲಕ್ಷ್ಮೀಂದರನ ಪಾದಗಳ ಹತ್ತಿರ ಹೋಗಿ ನಿಲ್ಲುವದು. ದಂಶಿ ಸುವ ಯತ್ನದಲ್ಲಿರುವದು. "ಆಘಾತವನ್ನು ಹೊಂದದೆ ಆಘಾತ ಮಾಡಬೇಡ" ಎಂಬ ದೈವವಾಣಿಯನ್ನು ಕೇಳುವದು. ಲಕ್ಷ್ಮೀಂದರನಿಂದ ಆಘಾತವನ್ನು ಹೊಂದುವ ಮಾರ್ಗಪ್ರತೀಕ್ಷೆ ಮಾಡುತ್ತಿರುವದು. ಲಕ್ಷ್ಮೀಂದರನು ಮಗ್ಗಲಾಗಿ ಮಲಗಿದನು. ಲಕ್ಷ್ಮೀಂದರನ ಕಾಲು ಹಾವಿಗೆ ತಾಕಿತು. ಹಾವು ಲಕ್ಷ್ಮೀಂದರನ ಕಾಲಿಗೆ ಕಚ್ಚಿ ಭರದಿಂದ ತಿರುಗಿ ಹೊರಟಿತು.)

**ಲಕ್ಷ್ಮೀಂದರ:**— ಅಯ್ಯೋ, ಘಾತವಾಯಿತು! ಎಷ್ಟು ಪ್ರಯತ್ನಿಸಿ ದರೂ ವಿಧಿಲಿಖಿತವು ತಪ್ಪಲಿಲ್ಲ! ನಾನು ಅಕಾಲದ ಅಪಮರಣದಿಂದ ಮುಕ್ತ

ನಾಗಲಿಲ್ಲ! ಪ್ರಿಯೆ, ಏಳು ಅಲ್ಲಿ ನೋಡು. ನನ್ನನ್ನು ಕಚ್ಚಿ ಕೃತಕಾರ್ಯವಾದ ಹಾವು ಸಂತೋಷದಿಂದ ಹೋಗುತ್ತಿದೆ! ಇನ್ನು ನಾನು ಬಹುಕಾಲ ಬದುಕಲಾರೆನು! ಅರಕ್ಷಣದಲ್ಲಿಯೆ ಸಾಯುವೆನು!... (ಬೇಹುಳೆಯು ಏಳುವಳು. ಪತಿಯು ತೋರಿದ ಸ್ಥಳವನ್ನು ನೋಡಿ ಹಾವನ್ನು ಕಾಣುವಳು. ಕ್ರೋಧಕಂಪಿತಳಾಗಿ ಎಲೆ-ಅಡಿಕೆಯ ಡಬ್ಬಿಯನ್ನೆತ್ತಿ ಹಾವನ್ನು ಹೊಡೆಯುವಳು. ಹಾವು ಸತ್ತು ಬೀಳುವದು. ಬಳಿಕ ಲಕ್ಷ್ಮೀಂದರನ ಕಡೆಗೆ ಹೊರಳಿ ಕಾತರಳಾಗಿ ನೋಡುವಳು. ಅವನ ಮೃತ್ಯುಯಾತನೆಯನ್ನು ಕಂಡು ಅತ್ಯಂತ ದುಃಖಿತಳಾಗುವಳು. ಮೈಮೇಲೆ ಬಿದ್ದು ಹೊರಳಾಡಿ ಶೋಕಿಸುವಳು.)

**ಲಕ್ಷ್ಮೀಂದರ:**— ಸಾ—ಯು -ವೆ—ನು! ಯಾವ—ಆಶೆಯೂ—ತೃಪ್ತವಾಗಲಿಲ್ಲ! ಸಾ—ಯು—ವೆ—ನು! (ಸಾಯುವನು)

(ಬೇಹುಳೆಯು ಪತಿಯ ಶಿರವನ್ನು ತನ್ನ ತೊಡೆಯ ಮೇಲಿಟ್ಟುಕೊಂಡು ಕುಳ್ಳಿಗುವಳು. ಕ್ಷಣಕಾಲ ದೀನ ಮುದ್ರೆಯಿಂದ ಪತಿಯ ಮುಖದ ಕಡೆಗೆ ನೋಡುವಳು. ಅವಳ ಕಣ್ಣುಗಳಿಂದ ಬಳಬಳನೆ ಅಶ್ರುಗಳು ಸುರಿಯುವವು. ಕೆಲ ಹೊತ್ತಿನ ಮೇಲೆ ಪತಿಯನ್ನು ಹಾಸುಗೆಯ ಮೇಲೆ ಮಲಗಿಸಿ, ಪತಿಯ ಪಾದಾರವಿಂದಗಳಿಗೆ ನಮಸ್ಕರಿಸುವಳು. ಬಳಿಕ ಮೆಲ್ಲಮೆಲ್ಲನೆ ಹೊರಟು ಬಾಗಿಲವನ್ನು ತೆರೆದು ಮಾವಂದಿರೆ ಎಂದು ಕೂಗುವಳು. ಚಾಂದನು ಗಾಬರಿಯಾಗಿ ಬಂದು ಏನಾಯಿತು ಎಂದು ಕೇಳುವನು. ಬೇಹುಳೆಯು ಉತ್ತರಕೊಡದಿರುವಳು. ಅವಳ ಕಣ್ಣುಗಳಿಂದ ಸುರಿಯುತ್ತಿದ್ದ ಅಶ್ರುಗಳನ್ನು ಕಂಡು ಚಾಂದನು ಮತ್ತಿಷ್ಟು ಗಾಬರಿಯಾಗುವನು. ಏನಾಗಿದೆ ಬೇಗ ಹೇಳು ಎಂದು ಕೇಳುವನು. ಬೇಹುಳೆಯು ನೀರವವಾಗಿದ್ದು ಪತಿಯ ಶವದ ಕಡೆಗೆ ಕೈಮಾಡುವಳು. ಚಾಂದನು ಉನ್ಮಾದನಂತಾಗಿ ಲಕ್ಷ್ಮೀಂದರ, ಲಕ್ಷ್ಮೀಂದರ ಎಂದು ಅರಚುತ್ತ ಶವದ ಹತ್ತಿರ ಹೋಗುವನು. ಮತ್ತೆ ಒದರುವನು. ಉತ್ತರವನ್ನು ಕೇಳದೆ ನಿಜಸ್ಥಿತಿಯನ್ನು ಊಹಿಸುವನು. ಪರೀಕ್ಷಿಸಿ ನೋಡಿ ತಿಳಿಯುವನು. ಕ್ಷಣಕಾಲದ ವರೆಗೆ ಪುತ್ರನ ಮುಖವನ್ನು ನೋಡುತ್ತಿದ್ದು ಕಣ್ಣೀರ ಸುರಿಸುವನು. ಬಳಿಕ ಬೇಹುಳೆಯ ಹತ್ತಿರ ಬಂದು ಅವಳನ್ನು ಕರೆದೊಯ್ಯುವನು.)

**ಚಾಂದ:**— ಪ್ರಿಯ ಸೊಸೆಯೆ—

**ಬೀಹುಳಿ:**— ಮಾವಂದಿರೆ —

**ಚಾಂದ:**— ನೀನು ನಿನ್ನ ಪ್ರಿಯ ಪತಿಯನ್ನು ಕಳೆದುಕೊಂಡೆ! ನಾನು ನನ್ನ ಮುದ್ದು ಮಗನನ್ನು ಕಳಕೊಂಡೆನು! ಇನ್ನು ನಾವೀರ್ವರೂ ಈ ಮುದ್ದು ಮುಖಕ್ಕೆ ವಂಚಿತರಾದೆವು! ಭವಿತವ್ಯವು ಬಲವಾದ್ದು! ಭವಿತವ್ಯವನ್ನು ನಿಷ್ಫಲಗೊಳಿಸುವದಕ್ಕೆ ಒಹಳವಾಗಿ ಯತ್ನಿಸಿದೆನು. ನನ್ನ ಸರ್ವಶಕ್ತಿಯನ್ನು ವೆಚ್ಚಮಾಡಿದೆನು. ಆದರೂ ಭವಿತವ್ಯವು ಬಯಲಾಗಲಿಲ್ಲ. ನನ್ನ ಆಶೆಯು ಈಡೇರಲಿಲ್ಲ. ಲಕ್ಷ್ಮೀಂದರನು ಭವಿತವ್ಯದ ಪಾಶದಲ್ಲಿ ಸಿಕ್ಕು ಅಕಾಲದಲ್ಲಿ ಅಪ ಮೃತ್ಯುವಿಗೆ ಆಹುತಿಯಾದನು... ಇನ್ನು ಏನು ಮಾತಾಡಿದರೂ ಲಕ್ಷ್ಮೀಂದರನು ಜೀವಿಸುವಂತಿಲ್ಲ. ಇವನೊಬ್ಬನಿಂದ ಮುನ್ನಿನ ಆರು ಮಂದಿ ಮಕ್ಕಳ ಮರಣದ ದುಃಖವನ್ನು ಮರೆದಿದ್ದೆನು. ಇನ್ನು ಯಾರಿಂದ ಈ ಏಳೂ ಮಕ್ಕಳ ಮೃತ್ಯು ದುಃಖವನ್ನು ಮರೆಯಲಿ?

**ಬೀಹುಳಿ:**— ಇನ್ನು ನನ್ನ ಗತಿಯಾರು? (ಶೋಕಿಸುವಳು.)

**ಚಾಂದ:**— ದೇವಾಧಿದೇವನಾದ ಮಹಾದೇವನು ಸರ್ವರಿಗೂ ಗತಿಕನು. ಅನಾಥರ ನಾಥನು. ಅವನನ್ನೆ ಮೊರೆಹೊಕ್ಕು ಪ್ರಪಂಚದ ಎಲ್ಲವನ್ನೂ ಮರೆ ದಿರಲಿಕ್ಕೆ ಬೇಕು! ಇನ್ನು ಈ ಶವವನ್ನು ಬಹಳ ಹೊತ್ತಿನ ವರೆಗೆ ಇಲ್ಲಿರಿಸುವಂತಿಲ್ಲ. ತೆಪ್ಪವನ್ನು ಕಟ್ಟಿಸಿ ಅದರಲ್ಲಿ ಈ ಶವವನ್ನಿರಿಸಿ, ನೀರಿನಲ್ಲಿ ತೇಲಿಬಿಡಬೇಕು. ಯಾಕೆಂದರೆ, ಒಮ್ಮೊಮ್ಮೆ ಹಾವು ಕಡಿದು ಸತ್ತ ಮನುಷ್ಯನು ನೀರಿನ ಗುಣದಿಂದ ಬದುಕಿದ ಉದಾಹರಣೆಗಳೂ ಉಂಟು. ಆದುದರಿಂದ ನಮ್ಮವರು ಸರ್ಪದಂಶನ ದಿಂದ ಮಡಿದ ಮನುಷ್ಯನ ಹೆಣವನ್ನು ನೀರಲ್ಲಿ ಚಲ್ಲಿಕೊಡಬೇಕೆಂದು ವಿಧಿಸಿದ್ದಾರೆ.

**ಬೀಹುಳಿ:**— ಮಾವಂದಿರೆ, ಅವಸರ ಮಾಡಬೇಡಿರಿ. ಈ ಮುಖವನ್ನು ಎಷ್ಟು ನೋಡಿದರೂ ತಣಿಯದಾಗಿದೆ. ನಾನು ಇನ್ನೂ ಕೆಲಕಾಲ ಹೀಗೆಯೆ ನೋಡುತ್ತಿರುವೆನು. ನೀವೂ ನೋಡಿಕೊಳ್ಳಿರಿ

**ಚಾಂದ:**— ನಾನು ನೋಡುತ್ತ ನಿಲ್ಲುವಂತಿಲ್ಲ. ಮಗನ ಮರಣದಿಂದ ದುಃಖಿತನಾಗಿರುವನೆಂಬದು ಆ ಕುರುಡ ಮನಸೆಗೆ ಗೊತ್ತಾದರೆ ಅವಳು ನಗು ವಳು. ಅಪಹಾಸ್ಯ ಮಾಡುವಳು. ವಿರೋಧಿಯ ದುಸ್ಥಿತಿಯಿಂದ ಸಂತೋಷಿಸಿ ಅಟ್ಟಹಾಸ್ಯ ಮಾಡುವಳು. ನಾನವಳ ಅಟ್ಟಹಾಸ್ಯವನ್ನು ನೋಡಲಾರೆನು.

ಮಗನ ಮರಣಕ್ಕಿಂತಲೂ ಆ ಅಟ್ಟಹಾಸ್ಯವನ್ನು ನೋಡುವದು ನನಗೆ ಹೆಚ್ಚು ತಾಪದಾಯಕವು.

**ಬೇಹುಳೆ:**— ಮಾವಂದಿರೆ, ಈ ದೇಹವನ್ನು ನೀರಿನಲ್ಲಿ ಚಲ್ಲಿ ಕೊಡುವಿರಾ ? ಬೇಡ ! ಈ ಸುವರ್ಣ ದೇಹವನ್ನು ಮೀನ ಮೊಸಳೆಗಳಿಗೆ ಆಹಾರವಾಗಿ ಕೊಡುವುದು ಬೇಡ ! ಇಲ್ಲಿಯೆ ಇರಲಿ. ಬಹುಕಾಲ ಹೀಗೆಯೆ ಇರಲಿ. ನಾನು ಅನುದಿನವೂ ಈ ದೇಹವನ್ನು ನೋಡುತ್ತ ಹೀಗೆಯೆ ಕುಳ್ಳಿರುವೆನು !

**ಚಾಂದ:** — ಹುಚ್ಚಿ, ಮೃತಶರೀರವನ್ನು ಮನೆಯಲ್ಲಿಟ್ಟುಕೊಂಡು ಕುಳಿತದ್ದುಂಟೆ ? ಜೀವವಿಲ್ಲದ ದೇಹವು ಕಟ್ಟಿಗೆ ಹೆಂಟೆಗಳಿಗಿಂತಲೂ ಹೀನವಾದ್ದು. ಅದನ್ನು ಮನೆಯಿಂದ ದೂರಸರಿಸಲಿಕ್ಕೇ ಬೇಕು.

**ಬೇಹುಳೆ:**— ಪ್ರಾಣಪತಿಯ ಈ ದೇಹವನ್ನು ಕಣ್ಮರೆ ಮಾಡಿಕೊಂಡು ಹೇಗೆ ಜೀವಿಸಲಿ ?

**ಚಾಂದ:**— ಲೋಕ ವ್ಯವಹಾರವನ್ನು ಪಾಲಿಸಲೆ ಬೇಕು. ಮೃತದೇಹದ ಸತ್ಕಾರ ಮಾಡಲಿಕ್ಕೆ ಬೇಕು. ಮತ್ತೊಂದು ಮಾತೆಂದರೆ, ಮೃತದೇಹದಲ್ಲಿ ಒಮ್ಮೊಮ್ಮೆ ಮತ್ತೆ ಜೀವ ಸಂಚಾರವಾದ ದೃಷ್ಟಾಂತಗಳೂ ಇವೆಯೆಂದು ನಾನು ಆಗಲೆ ಹೇಳಲಿಲ್ಲವೆ ? ನೀನು ಪುರಾಣಗಳ ಕಥೆಗಳನ್ನು ಕೇಳಿಲ್ಲವೆ ?

**ಬೇಹುಳೆ:**—(ಉತ್ತೇಜಿತಳಾಗಿ) ಪುರಾಣದ ಕಥೆಗಳು ಸತ್ಯವಾದವುಗಳೆ?

**ಚಾಂದ:**— ಸತ್ಯವಾದವುಗಳು.

**ಬೇಹುಳೆ:**— ಸಾವಿತ್ರೀ–ಸತ್ಯವಾನರ ಕಥೆಯು ನಿಜವಾದದ್ದೆ? ಸಾವಿತ್ರಿಯ ಚರಿತ್ರೆಯು ಸತ್ಯವಾದ್ದೆ ?

**ಚಾಂದ:**— ಏತಕ್ಕಾಗಿ ನೀನು ಹೀಗೆ ಕೇಳುತ್ತಿರುವೆ ?

**ಬೇಹುಳೆ:**— ಮಾವಂದಿರೆ, ನನಗೆ ನಿಜವಾದ ಉತ್ತರವು ಬೇಕಾಗಿದೆ.

**ಚಾಂದ:** — ಸಾವಿತ್ರಿಯ ಚರಿತ್ರೆಯು ನಿಜವಾಗಿಯೂ ಸತ್ಯವಾದ್ದು.

**ಬೇಹುಳೆ:**— ಮಾವಂದಿರೆ, ಈ ಶವವನ್ನು ನೀರಲ್ಲಿ ತೇಲಿಬಿಡುವುದಕ್ಕೆ ಇನ್ನು ನಾನು ಬೇಡೆನ್ನುವದಿಲ್ಲ. ನಾನೂ ಆ ಸಾವಿತ್ರಿಯಂತೆ ಆಚರಿಸುವೆನು. ಅವ್ವನು ನೀನು ಸಾವಿತ್ರಿಯಂತೆ ತೇಜಸ್ವಿನಿಯಾಗಿರುವೆಯೆಂದು ಹೇಳಿರುವಳು.

ಅಪ್ಪನು ನೀನು ಸಾವಿತ್ರಿಯಂತೆ ಯಶೋಮಂಡಿತೆಯಾಗುವೆಯೆಂದು ಆಶೀರ್ವದಿಸಿರುವೆನು. ನಾನು ತೆಪ್ಪದಲ್ಲಿ ಕುಳಿತು ಈ ದೇಹವನ್ನು ಕಾಯುತ್ತ ಹೋಗುವೆನು. ಪ್ರವಾಹವು ಒಯ್ದುತ್ತ ಸಾಗಿ ದೇವಲೋಕಕ್ಕೆ ಹೋಗುವೆನು. ಸಾವಿತ್ರಿಯು ಹೆದರಲಿಲ್ಲ—ನಾನೂ ಹೆದರುವದಿಲ್ಲ! ಸಾವಿತ್ರಿಯು ಪತಿ ಮರಣಕ್ಕಾಗಿ ಶೋಕಿಸಲಿಲ್ಲ—ನಾನೂ ಶೋಕಿಸುವದಿಲ್ಲ! ಸಾವಿತ್ರಿಯು ಯಮರಾಜನನ್ನು ಜಯಿಸಿದಳು—ನಾನೂ ಜಯಶಾಲಿನಿಯಾಗುವೆನು! ಸಾವಿತ್ರಿಯು ಮೃತ ಪತಿಯನ್ನು ಮರಳಿ ಪಡೆದಳು—ನಾನೂ ಮೃತಪತಿಯನ್ನು ಮತ್ತೆ ಬದುಕಿಸಿಕೊಂಡು ನಿಮ್ಮ ದರ್ಶನಕ್ಕೆ ಬರುವೆನು. ಸಂಗಡ ಇವರನ್ನು ಕರೆತಂದಿರುವೆನು.

**ಚಾಂದ:**— ಅಮ್ಮಾ, ನಿನಗಿದು ಸಾಧ್ಯವೆ?

**ಬೇಹುಳಿ:**— ಏಕೆ ಸಾಧ್ಯವಾಗಬಾರದು? ಸಾವಿತ್ರಿಯೂ ನನ್ನಂತೆಯೆ ಅಬಲೆಯಾಗಿರಲಿಲ್ಲವೆ? ಅವಳಿಗೆ ಸಾಧ್ಯವಾದುದನ್ನು ನಾನು ನಿಶ್ಚಯವಾಗಿಯೂ ಸಾಧಿಸಿಕೊಳ್ಳುವೆನು!

**ಚಾಂದ:**— ನೀನೂ ಅಂತಹ ತೇಜಸ್ವಿನಿಯೆ ಇರುವೆ! ಆದರೂ ಮಗು, ಅದು ಬಹು ಕಠಿಣವಾದುದು!

**ಬೆಹುಳಿ:**— ಏನಿದ್ದರೂ ನಾನದನ್ನು ಸಾಧಿಸಿಕೊಳ್ಳುವೆನು! ಕೃತಕಾರ್ಯಳಾಗುವೆನು!

**ಚಾಂದ:**— ಅಮ್ಮಾ, ನೀನು ನನ್ನ ಸೊಸೆಯಲ್ಲ—ಮಗಳು! ಕೃತಕಾರ್ಯಳಾಗೆಂದು ಅಂತಃಕರಣಪೂರ್ವಕವಾಗಿ ಆಶೀರ್ವದಿಸುತ್ತೇನೆ. ನೀನು ಯಶಸ್ವಿನಿಯಾಗಿ ಲಕ್ಷ್ಮೀಂದರನನ್ನು ಕರೆತಂದೆಯೆಂದರೆ, ನಾನೊಮ್ಮೆ ಆ ಕುರುಡ ಮನಸೆಯ ಕಡೆಗೆ ನೋಡಿ ಗಹಗಹಿಸಿ ನಗಬೇಕೆಂದಿರುವೆನು. ಲಜ್ಜೆಯಿಂದ ಅವಳು ತಲೆಬಾಗುವಂತೆ ಮಾಡಬೇಕೆಂದಿರುವೆನು. ಶಂಭೊ, ಪರಮೇಶ್ವರನೆ, ಈ ಪತಿವ್ರತೆಗೆ ಆಶೀರ್ವಾದ ಶಕ್ತಿಯನ್ನು ದಯಪಾಲಿಸು. ಕೃತಕಾರ್ಯಳಾಗುವಂತೆ ಅನುಗ್ರಹಿಸು. ( ಹೊರಡುವನು. )

**ಬೇಹುಳಿ:**— ಸಾವಿತ್ರೀದೇವಿಯೆ, ದಾರಿಯನ್ನು ತೋರು. ಈ ಬಾಲೆಯನ್ನು ಅನುಗ್ರಹಿಸಿ ಸರಿಯಾದ ದಾರಿಯನ್ನು ತೋರಿಸು.

( ಸನಕೆಯು ಪ್ರವೇಶಿಸಿ ಚಾಂದನ ಬಳಿಗೆ ಬರುವಳು.)

**ಸನಕಾ:**— ಪ್ರಾಣನಾಥರೆ, ಬೆಳಗಾಗ ಬಂದಿದೆ, ಎಲ್ಲವೂ ಕ್ಷೇಮವಷ್ಟೆ! ಲಕ್ಷ್ಮೀಂದರನು ಸುರಕ್ಷಿತನಾಗಿರುವನಷ್ಟೆ!

**ಚಾಂದ:**— ಸುರಕ್ಷಿತನೆ ಸರಿ! ಸತಿಯ ರಕ್ಷಣೆಯಲ್ಲಿ ದೀರ್ಘ ನಿದ್ರೆ, ಯನ್ನನುಭವಿಸುತ್ತಿರುವನು!

**ಸನಕಾ:** - ಅಂದರೆ? ಈಗ ಲಕ್ಷ್ಮೀಂದರನೆಲ್ಲಿ?

**ಚಾಂದ:**— (ಮೇಲಕ್ಕೆ ಕೈ ಮಾಡಿ) ಸ್ವರ್ಗದಲ್ಲಿ!

(ಸನಕೆಯು ಮೂರ್ಛಿತಳಾಗಿ ಬೀಳುವಳು.)

---

## ನಾಲ್ಕನೆಯ ಅಂಕ



### ಮೊದಲನೆಯ ಪ್ರವೇಶ

(ನಿಛನಿ ನಗರದ ಹತ್ತಿರದಲ್ಲಿಯ ನದಿಯ ದಂಡೆಯ ಪ್ರದೇಶ. ಒಂದೆಡೆಯಲ್ಲಿ ಮನಸಾದೇವಿಯು ನಿಂತಿರುವಳು. ಬೇರೊಂದು ಸ್ಥಳದಲ್ಲಿ—ಸೋಪಾನಶ್ರೇಣಿಯ ಬಳಿಯಲ್ಲಿ ಸಾಯಸವದಾಗರನೂ ಅಮಲೆಯೂ ಇವರ ಇಬ್ಬರು ಮಕ್ಕಳೂ ನಿಂತು ಬೇಹುಳೆಯ ಮಾರ್ಗ ಪ್ರತೀಕ್ಷೆ ಮಾಡುತ್ತಿರುವರು.)

**ಮನಸಾ:**— (ಆತ್ಮಗತಂ) ಲಕ್ಷ್ಮೀಂದರನ ಮರಣದ ಮುಖಾಂತರವಾಗಿ ನಾನು ಆರಿಗೆ ಶಿಕ್ಷೆ ವಿಧಿಸಿದಂತಾಯಿತು? ಚಾಂದ ಸವದಾಗರನಿಗೊ? ಬೇಹುಳೆಗೊ? ಒಂದೇ ಒಂದು ದಿನದಲ್ಲಿ—ಒಂದೇ ಒಂದು ನಿಮಿಷದಲ್ಲಿ—ಆರು ಮಕ್ಕಳು ಸರ್ಪದಂಶನದಿಂದ ಅಕಾಲಮೃತ್ಯುವಿಗೆ ತುತ್ತಾದರೂ ತಲೆಬಾಗಿಸದಿದ್ದ ಅವನು ಒಬ್ಬ ಮಗನ ಮರಣದಿಂದ ನನಗೆ ಶರಣುಬಂದಾನೆ? ಸಾಧ್ಯವಲ್ಲ! ಮೀರಿದ ಹಟಮಾರಿಯವನು! ಉಡದ ಹಿಡಿತದವನವನು! ಲಕ್ಷ್ಮೀಂದರನ ಮರಣವು ವಿಶೇಷ ದುಃಖವನ್ನುಂಟುಮಾಡಿದ್ದು ಬೇಹುಳೆಗೆ! ಸೂಳೆಯ ಪಾಪವು ಸಂನ್ಯಾಸಿಗೆ ತಗಲಿದಂತೆಯೆ ಸರಿ! ಬೇಹುಳೆಯು ಕೋಮಲ ಪ್ರಕೃತಿಯ ಬಾಲೆ. ನನ್ನ ವಿಷಯದಲ್ಲಿ ಯಾವ ಅಪರಾಧವನ್ನು ಮಾಡಿದವಳಲ್ಲ! ನಾನು ಇಂಥವಳನ್ನು ಶಿಕ್ಷಿಸಿದ್ದು ಅನ್ಯಾಯವಲ್ಲವೆ? ನಾನು ದೇವಿಯಾಗಿದ್ದರೂ ಅಬಲೆ ಋಷಿವರ್ಯರನ್ನು ಕೈಹಿಡಿದು ಭೂಲೋಕದ ಸತಿಯರ ಸುಖ—ದುಃಖಗಳನ್ನು ಅನುಭವಿಸಿದವಳು

ಬೇಹುಳಿಯ ಈಗಳಿನ ಸ್ಥಿತಿಯು ಅತಿಶಯ ಶೋಚನೀಯವಾದ್ದು. ನಾನಿದನ್ನು ನೋಡಿ ಸಹಿಸದವಳಾಗಿರುವೆನು. ಏನು ಮಾಡಲಿ? ...... ( ಅತ್ತಿತ್ತ ನೋಡಿ ) ಅಲ್ಲಿ ಬೇಹುಳಿಯು ತೆಪ್ಪದಲ್ಲಿ ಪತಿಯ ಶವವನ್ನಿಟ್ಟುಕೊಂಡು ಬರುತ್ತಿರುವಳು. ಇತ್ತ ಬೇಹುಳಿಯ ತಾಯಿತಂದೆಗಳೂ ಸಹೋದರರೂ ಆಗಮನವನ್ನು ಕಾಯ್ದು ಕೊಂಡಿರುವರು. ಮುಂದೇನು ನಡೆಯುವದೊ ಅದೃಶ್ಯಳಾಗಿದ್ದು ನೋಡುವೆನು... (ತೆಪ್ಪದಲ್ಲಿ ಪತಿಯ ಶವದ ಸಾನ್ನಿಧ್ಯದಲ್ಲಿ ಕುಳಿತಿದ್ದ ಬೇಹುಳಿಯು ನದಿಯ ಪ್ರವಾಹದ ಗುಂಟ ತೇಲುತ್ತ ಬರುವಳು. )

**ಬೇಹುಳಿ—** ನದಿಯಲ್ಲಿ ನೆರೆದ ನರನಾರಾಯಣರೆ, ನನಗೆ ಪತಿಭಿಕ್ಷೆಯನ್ನು ಕರುಣಿಸಿರಿ! ನಾನು ಮೃತಪತಿಯನ್ನು ಮತ್ತೆ ಪಡೆದು ಚಿರಸೌಭಾಗ್ಯವತಿಯಾಗು ವಂತೆ ಆಶೀರ್ವದಿಸಿರಿ!

**ಸಾಯ—** (ಭರದಿಂದ ಸಮೀಪಕ್ಕೆ ಹೋಗಿ) ಮುದ್ದು ಮಗಳೆ, ಬಂದಿ ರುವೆಯಾ? ಬಾ, ( ಎದುರಿನ ದೃಶ್ಯವನ್ನು ನೋಡಿ ಸಹಿಸದವನಾಗಿ ಮೋರೆ ಯನ್ನು ಮುಚ್ಚಿಕೊಳ್ಳುವನು. )

**ಬೇಹುಳಿ—** ಅಪ್ಪಾ,

**ಅಮಲೆ—** ( ಉನ್ಮಾದಿನಿಯಂತೆ) ಮಗಳೆ, ಒಬ್ಬಳೆ ಬಂದಿರುವೆಯಾ? ನಿನ್ನ ಪ್ರಿಯತಮನೆಲ್ಲಿ? ನನ್ನ ಆದರದ ಅಳಿಯನೆಲ್ಲಿ?

**ಸುಬಲ-ಶ್ರೀರಾಮ—** ಅಕ್ಕ, ಮಾವನೆಲ್ಲಿ? ನೀನೊಬ್ಬಳೆ ಏಕೆ ಬಂದೆ? ಅವನನ್ನೇಕೆ ಕರೆತರಲಿಲ್ಲ?

**ಬೇಹುಳಿ—** ಇಗೊ, ಇವರು ಇಲ್ಲಿರುವರು. ಆದರೆ ಮಲಗಿರುವರು. ಎಷ್ಟು ಒದರಿದರೂ ಏಳಲೊಲ್ಲರು! ನೀವಾದರೂ ಇವರನ್ನು ಎಬ್ಬಿಸಿರಿ! ಪ್ರಿಯ ತಮ, ಏಳಿರಿ ಅಲ್ಲಿ ನೋಡಿರಿ. ಅವ್ವನು ಬಂದಿದ್ದಾಳೆ. ಅಪ್ಪನಿದ್ದಾನೆ. ತಮ್ಮಂ ದಿರು ಬಂದಿದ್ದಾರೆ. ಅವರೆಲ್ಲರೂ ನಿಮ್ಮನ್ನು ಕರೆಯುತ್ತಿದ್ದಾರೆ. ಹೀಗೆ ಬಹು ಕಾಲ ನಿದ್ದೆಯಲ್ಲಿರುವದು ನೆಟ್ಟಗಲ್ಲ! ಎದ್ದು ಅವರೊಡನೆ ಮಾತಾಡಿರಿ!

**ಸಾಯ—** ಮಗು, ನಾನು ಈ ದೃಶ್ಯವನ್ನು ನೋಡಲಾರೆನು! ನಿನ್ನ ಮಾತುಗಳನ್ನು ಕೇಳಲಾರೆನು! ಹೃದಯವು ಇಬ್ಭಾಗವಾಗುವುದರಲ್ಲಿದೆ! ದುಷ್ಟ ವಿಧಿಯೆ! ನೀನಿದೇನ ಮಾಡಿದೆ?

**ಅಮಲೆ** — ( ಉನ್ಮಾದಾವಸ್ಥೆಯಲ್ಲಿಯೆ ) ಅಳಿಯನನ್ನು ಕರೆತಂದಿರು ವೆಯಾ ? ಒಳಿತು ಮಾಡಿರುವೆ ! ಬನ್ರಿ. ಇಬ್ಬರೂ ಬನ್ರಿ ! ಅರಮನೆಗೆ ಹೋಗೋಣ!

**ಸುಬಲ ಶ್ರೀರಾಮ** — ( ಸಹೋದರಿಯ ಹತ್ತರ ಹೋಗಿ) ಅಕ್ಕಾ, ನಮ್ಮ ಕೈಹಿಡಿದುಕೊಂಡು ಇಳಿದು ಬಾ. (ಕೈ ಚಾಚುವರು. ಬೇಹುಳೆಯು ನಿಷೇಧಿಸುವಳು. ದೂರ ಸರಿಯಿರಿಯೆಂದು ಸನ್ನೆ ಮಾಡುವಳು. )

**ಅಮಲೆ** — ಏಕೆ ತಡಮಾಡುವೆಯಮ್ಮಾ ? ಬೇಗ ಇಳಿದು ಬಾ. ಮನೆಗೆ ಹೋಗೋಣ.

**ಬೇಹುಳೆ** — ಅವ್ವಾ, ಇಂದು ಬರಲಾರೆನು !

**ಎಲ್ಲರು** — ಎಂದು ಬರುವೆ ? ಯಾವಾಗ್ಗೆ ಬರಬೇಕೆಂದಿರುವೆ ?

**ಬೇಹುಳೆ** — ಇದು ರಾತ್ರಿಯ ಸಮಯ. ಸುತ್ತಲೂ ಕತ್ತಲು ಕವಿದಿದೆ. ಈ ಅಂಧಕಾರದಲ್ಲಿ ನಾನು ಬರಲಾರೆನು ! ರಾತ್ರಿಯು ಹೋಗಿ ಬೆಳಗಾಗಲಿ. ಇವರು ನಿದ್ದೆಯಿಂದೆಚ್ಚರಿಯಲಿ. ಇಬ್ಬರೂ ಕೂಡಿ ಬಂದಿರುವೆವು. ಇವರನ್ನು ಇಲ್ಲಿಯೇ ಬಿಟ್ಟು ನಾನೊಬ್ಬಳೆ ಹೇಗೆ ತೆಪ್ಪವನ್ನಿಳಿದು ಬರಲಿ ? ಅರಮನೆಯನ್ನು ಪ್ರವೇಶಿಸಲಿ ? ಆಗದು ! ನನ್ನಿಂದ ಸರ್ವಥಾ ಆಗದು ! ಹೋಗುವೆನು ! ಇವರೊಡನೆ ಮುಂದೆ ಹೋಗುವೆನು !

**ಸಾಯ** — ಎಲ್ಲಿಗೆ ಹೋಗುವೆಯಮ್ಮಾ ?

**ಬೇಹುಳೆ** — ಅಪ್ಪಾ, ಎಲ್ಲಿಗೆ ಹೋಗುವೆನೆಂಬದನ್ನೂ ಹೇಳಲಿಯಾ ? ಹೇಳುವೆನು, ಕೇಳು. ಯಾವದೇಶದಲ್ಲಿ ಮೃತಸಂಜೀವಿನಿಯ ಬಳ್ಳಿಯಿದೆಯೊ ಆ ದೇಶಕ್ಕೆ ಹೋಗುವೆನು. ಆ ಬಳ್ಳಿಯನ್ನು ಕಿತ್ತಿಕೊಂಡು ಇವರ ದೇಹಕ್ಕೆ ತಗಲಿಸುವೆನು. ಇವರನ್ನು ಎಚ್ಚರಿಸಿಕೊಂಡು ಮತ್ತೆ ತೆಪ್ಪವನ್ನೇರಿ ಹೊರಟು ಬರುವೆನು. ಅವ್ವಾ, ನೀನು ಆ ದಿನದ ಮಾರ್ಗಪ್ರತೀಕ್ಷೆಮಾಡುತ್ತಿರು. ಆ ದಿನವೂ ನಾವು ಇದೇ ಮಾರ್ಗವಾಗಿ ಬರುವೆವು. ಅಂದಿನ ನಮ್ಮ ಸ್ವಾಗತಕ್ಕಾಗಿ ಆನೆಯು ಸಿದ್ಧವಿರಲಿ. ಕುದುರೆಗಳು ಸಿಂಗಾರಾಗಿರಲಿ. ಮಂಗಳ ವಾದ್ಯಗಳು ಮೊಳಗುತ್ತಿರಲಿ— ( ತೆಪ್ಪವು ಮುಂದೆ ಸಾಗುವದು.)

**ಎಲ್ಲರು** — ( ಮುಂದೆ ಹೋಗಿ) ಬೇಹುಳೆ, ಅಮ್ಮಾ ಬೇಹುಳೆ—

**ಬೇಹುಳಿ—** ಇನ್ನು ಮಾತು ಸಾಕು. ನಾನು ಹೋಗುವೆನು. ಆಶೀರ್ವಾದ ಮಾಡಿರಿ. ಕೃತಕಾರ್ಯಳಾಗೆಂದು ಮನಃಪೂರ್ವಕವಾಗಿಯೂ ಆಶೀರ್ವದಿಸಿರಿ. ಸೌಭಾಗ್ಯವತಿಯಾಗಿ ಮರಳಿ ಬರಲೆಂದು ಕರುಣಾನಿಧಿಯಾದ ಆ ಪರಮೇಶ್ವರ ನನ್ನು ಪ್ರಾರ್ಥಿಸಿಕೊಳ್ಳಿರಿ.

**ಸಾಯು—** ಅಮ್ಮಾ, ನೀನು ಅಂಥವಳೆ ಇರುವೆ. ನಿಶ್ಚಯವಾಗಿಯೂ ಕೃತಕಾರ್ಯಳಾಗುವೆ. ಅಮೃತವಿರುವ ದೇಶಕ್ಕೆ ಹೋಗಿ, ಮೃತಪತಿಯನ್ನು ಪುನರ್ಜೀವನಗೊಳಿಸಿಕೊಂಡು ಚಿರಸೌಭಾಗ್ಯವತಿಯಾಗಿ ಸತೀಶಿರೋಮಣಿ ಯೆಂದು ಖ್ಯಾತಳಾಗುವೆ. ಹೋಗಿ ಬಾ. ನಾನು ಬೇಡೆನ್ನುವದಿಲ್ಲ. ( ಮೋರೆ ಯನ್ನು ತಿರುಗಿಸುವನು ) ಅಯ್ಯೊ, ಹೃದಯದಲ್ಲಿ ಅಲ್ಲೋಲಕಲ್ಲೋಲವಾಗು ತ್ತಿದೆ! ಮನಸ್ಸು ಕಳವಳಗೊಳ್ಳುತ್ತಿದೆ! ಏನು ಮಾಡಲಿ? ನಾನು ಸಂಪೂರ್ಣ ನಿರುಪಾಯನಾಗಿದ್ದೇನೆ! (ಮೇಲಕ್ಕೆ ಮೋರೆ ಮಾಡಿ) ಭಗವಂತನೆ, ನೀನೆ ನನ್ನ ಈ ಮಗಳ ರಕ್ಷಕನು. ಇವಳನ್ನು ನಿನಗೊಪ್ಪಿಸಿರುವೆನು. ಅತುಳಬಳವನ್ನಿತ್ತು ಕೃತಕಾರ್ಯಳಾಗುವಂತೆ ಕೃಪೆಮಾಡು.

**ಅಮಲೆ—** ಹೋಗಿಯೆ ಬಿಡುವೆಯೇನಮ್ಮಾ? ಹೋಗು. ಮನಸಾ ದೇವಿಯ ಅನುಗ್ರಹದಿಂದ ಸಿದ್ಧಿಯನ್ನು ಸಂಪಾದಿಸಿ ತಿರುಗಿ ಬೇಗನೆ ಬಾ. ( ಮೋರೆಯನ್ನು ಹೊರಳಿಸಿ ಕಣ್ಣೊರಿಸಿಕೊಳ್ಳುವಳು. )

**ಸುಬಲ ಶ್ರೀರಾಮ—** ( ತೆಪ್ಪದ ಗುಂಟ ಓಡುತ್ತ ಹೋಗಿ ) ಅಕ್ಕಾ, ಇನ್ನು ತುಸುಹೊತ್ತಿನಲ್ಲಿ ಕತ್ತಲಾಗುವದು. ಕತ್ತಲೆಯ ರಾತ್ರಿಯಲ್ಲಿ ಹೇಗೆ ಮುಂದೆ ಹೋಗುವೆ?

**ಬೇಹುಳಿ—** ಹೇಗಾದರೂ ಮಾಡಿ ಹೋಗಲೆಬೇಕು. ನೀವು ದಿನಾಲು ಸಾಯಂಕಾಲದಲ್ಲಿ ನದಿಯಲ್ಲಿ ದೀಪಗಳನ್ನು ಬಿಡುತ್ತ ಹೋಗಿರಿ. ಅವು ನನ್ನ ಬಳಿಗೆ ಬಂದು ಕತ್ತಲೆಯ ರಾತ್ರಿಯಲ್ಲಿ ನನಗೆ ಮುಂದಿನ ದಾರಿಯನ್ನು ತೋರು ವವು. ತಪ್ಪದೆ ದಿನಾಲು ಸಂಜೆಯಮುಂದೆ ಬಿಡುತ್ತ ಹೋಗಿರಿ. ಮರೆಯಬೇಡಿರಿ.

**ಶ್ರೀರಾಮ ಸುಬಲ—** ತಪ್ಪದೆ ಬಿಡುವೆವು. ( ಮೋರೆಯನ್ನು ತಿರುಗಿಸಿ ಅಳತೊಡಗುವರು. )

**ಸಾಯು**—ಹೋಗಿ ಬಾರವ್ಮಾ, ಹೋಗಿಬಾ. ಭಗವಂತನು ನಿನ್ನ ಈ ಸಾಹಸಕ್ಕೆ ತಕ್ಕ ಫಲವನ್ನು ಕೊಡಲಿ. ನಿನಗೆ ಮಂಗಳವನ್ನುಂಟುಮಾಡಲಿ. (ತೆಪ್ಪವು ದೂರ ಹೋಗುವದು. ಎಲ್ಲರೂ ಏಕದೃಷ್ಟಿಯಿಂದ ನೋಡುತ್ತಿರುವರು. ಕಣ್ಣಿಗೆ ಕಾಣದಂತಾದುದನ್ನು ಕಂಡು ಅಮಲೆಯು ಮೂರ್ಛಿತಳಾಗುವಳು. ಎಲ್ಲರೂ ಅವಳು ಮೂರ್ಛೆಯಿಂದೆಚ್ಚರಿಯುವಂತೆ ಮಾಡುವರು. ಜಡಪಾದಗಳಿಂದ ಮನೆಯ ಕಡೆಗೆ ನಡೆಯುವರು. )

**ಮನಸಾ**— ( ಆತ್ಮಗತಂ ) ಎಂತಹ ಹೃದಯವಿದಾರಕ ದೃಶ್ಯವಿದು ! ಇನ್ನು ನನ್ನಿಂದ ಸಹಿಸಲಿಕ್ಕಾಗದು ! ಲಕ್ಷ್ಮೀಂದರನ ಜೀವವನ್ನು ತಿರುಗಿಸಲಿಕ್ಕೆ ಬೇಕು. ಬೇಹುಳೆಯ ಕಷ್ಟವನ್ನು ಪರಿಹರಿಸಲಿಕ್ಕೆಬೇಕು. ಇದಕ್ಕಾಗಿ ಏನು ಮಾಡಲಿ ?— ( ಗೇನಿಸುವಳು ) ಲಕ್ಷ್ಮೀಂದರನು ಪುನರ್ಜೀವಿತನಾದರೆ, ಚಾಂದ ಸವದಾಗರನು ನನ್ನ ಪೂಜೆ ಮಾಡಲಿಕ್ಕೆ ಒಪ್ಪಬಹುದೆ ? ಮಾಡಲಿ, ಮಾಡದಿರಲಿ, ಚಾಂದ ಸವದಾಗರನ ಪೂಜೆಯು ಸಲುವಾಗಿ ಬೇಹುಳೆಗೆ ತಾಪಗೊಡುವದು ನ್ಯಾಯವಲ್ಲ ! ನನ್ನ ಅನುಗ್ರಹದಿಂದ ಮಡಿದ ಮಗನನ್ನು ಮತ್ತೆ ಪಡೆದ ಚಾಂದನು ಕೃತಜ್ಞತಾವಶನಾಗಿ ಪೂಜೆಗೆ ಸಿದ್ಧನಾದರೂ ಆಗಬಹುದು !— (ಹೋಗುವಳು)

( ನದಿಯಲ್ಲಿ ಮನಸಾದೇವಿಯು ಒಗೆಯುತ್ತ ನಿಂತಿರುವಳು. ಬಳಿಯಲ್ಲಿ ಆಸ್ತೀಕನಿರುವನು. ಬೇಹುಳೆಯ ತೆಪ್ಪವು ಬರುತ್ತಿರುವದು. ಮನಸೆಯು ಆಸ್ತೀಕನನ್ನು ಹೊಡೆದಂತೆ ನಟಿಸುವಳು. ಆಸ್ತೀಕನು ಮೃತಪ್ರಾಯನಾಗಿ ಬೀಳುವನು. ಬೇಹುಳೆಯ ತೆಪ್ಪವು ತೀರ ಸಮೀಪಕ್ಕಿರುವದು. )

**ಬೇಹುಳೆ**— ನೀನಾರವ್ಮಾ? ಆ ಹುಡುಗನನ್ನು ಕೊಂದುಬಿಟ್ಟೆಯಲ್ಲ!

**ಮನಸಾ**— ಊರ ಉಸಾಬರಿ ನಿನಗೇಕೆಬೇಕು ? ಸುಮ್ಮನೆ ಮುಂದೆ ಹೋಗಬಾರದೆ ! ಬಳಿಯಲ್ಲಿ ಏನೊ ಇದೆಯಲ್ಲ (ನೋಡಿದಂತೆ ಮಾಡಿ) ಶವವು ! ಯಾರ ಹೆಣವದು ? ಯಾರನ್ನು ಗೊತ್ತಿಗೆ ಹಚ್ಚಿರುವೆ? ಪತಿಯನ್ನೆ ? ಒಳ್ಳೆ ಗಟ್ಟಿಗಳಾದ ಹೆಂಗುಸು! ( ಬೇಹುಳೆಯು ಸ್ತಬ್ಧಳಾಗಿ ನೋಡುತ್ತಿರುವಳು ) ಮಗು, ಏಳು. ಹೊಟ್ಟೆಹಸಿದಿದೆಯೆ ? ಮನೆಗೆ ಹೋಗೋಣ ನಡೆ. ( ಮೈಮೇಲೆ ಕೈಯೆಳೆಯುವಳು. ಆಸ್ತೀಕನು ಚೇತರಿಸಿಕೊಂಡು ಎದ್ದು ನಿಲ್ಲುವನು. )

**ಬೇಹುಳೆ**— ಜನನಿ, ನೀನಾರು ? ನಿನ್ನ ಶಕ್ತಿಯು ಅದ್ಭುತವಾದದ್ದು !

ನನ್ನಮೇಲೆ ದಯದೋರು! ಮಗನಿಗೆ ಪುನರ್ಜೀವನವನ್ನು ದಯಪಾಲಿಸಿದಂತೆ ನನಗೆ ನನ್ನ ಪತಿಯ ಜೀವನವನ್ನು ಕರುಣಿಸು!

**ಆಸ್ತೀಕ—** ಅಮ್ಮಾ, ಅವಳಾರು?

**ಮನಸಾ—** ಯಾರಿದ್ದ ಗೊಡವೆ ನಮಗೇಕೆ? ಹಸಿವೆಯು ಬಹಳವಾಗಿ ದೆಯೆಂದು ಹಟಮಾಡುತ್ತಿದ್ದೆಯಲ್ಲವೆ? ನಡೆ, ಮನೆಗೆ ಹೋಗೋಣ. (ಹೋಗುವರು. ತೆಪ್ಪವು ಮುಂದೆ ಸಾಗುವದು. ಕ್ರಮವಾಗಿ ಕತ್ತಲಾಗುವದು. ಭೂತ ಪ್ರೇತಗಳು ಕಾಣಿಸಿಕೊಳ್ಳುವವು.)

**ಭೂತ—** ಮೃತದೇಹದಲ್ಲಿ ಮತ್ತೆ ಪ್ರಾಣಸಂಚಾರವಾಗುವದುಂಟೆ? ಆ ಶವವನ್ನು ನನಗೊಪ್ಪಿಸಿ ಬಿಡು!

**ಪ್ರೇತ—** ಹೊಟ್ಟೆ ಹಸಿದಿದೆ! ಈ ಹೆಣವು ನನಗೆ ಬೇಕೇ ಬೇಕು!

**ಬೇಹುಳೆ—** ಅನಾಥರ ನಾಥ, ಭಗವಂತ, ಸಮಯದಲ್ಲಿ ನನಗೆ ನಿನ್ನ ಹೊರತು ಗತಿಯಾರು? (ಕೈ ಜೋಡಿಸಿ ಮೇಲೆ ನೋಡುವಳು)

**ಭೂತ—** ತಡವಾದರೆ ನಾನು ಸಹಿಸುವಂತಿಲ್ಲ! ಬೇಗನೆ ಕೊಡು!

**ಪ್ರೇತ—** ವಿಚಾರಮಾಡುವೆಯೇನು? ಬೇಗನೆ ಆ ಹೆಣವನ್ನು ನನ್ನ ವಶಕ್ಕೆ ಕೊಟ್ಟುಬಿಡು! ಇಲ್ಲವಾದರೆ, ನಾನು ನಿನ್ನನ್ನೆ ತಿಂದು ಬಿಡುವೆನು!

**ಬೇಹುಳೆ—** ಗಾಢವಾದ ಅಂಧಕಾರ! ನನಗೇನೂ ಕಾಣದಾಗಿದೆ! ಯಾರೊ ನನ್ನನ್ನು ತಿನ್ನಲಿಕ್ಕೆ ಬಂದಿರುವಂತೆ ತೋರುತ್ತದೆ! ದೀನದಯಾಳು ಭಗವಂತನೆ, ಹೃದಯದಲ್ಲೂ ಹೊರಗೂ ಬೆಳಕನ್ನು ಹೊತ್ತಿಸು! ಅಂಧಕಾರದ ರಾಜ್ಯದಲ್ಲಿ ತಳಮಳಿಸುತ್ತಿರುವ ಈ ಅಬಲೆಗೆ ಪ್ರಕಾಶವನ್ನು ತೋರಿಸು! ಸಾವಿತ್ರೀ ದೇವಿಯೆ, ನಿನ್ನ ಆ ಪಾತಿವ್ರತ್ಯದ ಪ್ರಕಾಶವೆಲ್ಲಿ? ನಿನ್ನ ಸಹೋದರಿಯಂತಿದ್ದ ನನಗೆ ತೋರಿಸು. ದಾರಿಗಾಣದೆ ಚಟಪಡಿಸುತ್ತಿದ್ದ ನನಗೆ ಮಾರ್ಗ ಪ್ರದರ್ಶನಮಾಡು!

**ಭೂತ—** ನೀನು ಬಹಳ ಹಟಮಾರಿಯಾಗಿರುವಂತೆ ಕಾಣುತ್ತದೆ! ಸರಿಯತ್ತ! ನಾನು ಹೆಣವನ್ನೆತ್ತಿಕೊಂಡು ಹೋಗುವೆನು!

**ಪ್ರೇತ** - ಅವಳನ್ನೇನು ಕೇಳುವೆ ! ಬಾ. ಇಬ್ಬರೂ ಶವವನ್ನು ತಕ್ಕೊಂಡು ಹೋಗಿ ಭಕ್ಷಿಸೋಣ! (ಭೂತ ಪ್ರೇತಗಳು ಹೆಣವನ್ನು ಹೊತ್ತುಕೊಂಡು ಹೋಗ ಲಿಕ್ಕೆ ಪ್ರಯತ್ನಿಸುವವು. )

**ಬೇಹುಳೆ**— ಸುಬಲನೆ, ಶ್ರೀರಾಮನೆ, ನಿಮ್ಮ ಆ ಸಂಧ್ಯಾದೀಪಗಳೆಲ್ಲಿ ? ಅವು ನೀರಲ್ಲಿ ಮುಣುಗಿ ಹೋಗಿ ನನ್ನ ಪಾಲಿಗೆ ಇಲ್ಲದಾದವೆ ?— ( ಹೆಣವನ್ನು ಅವಚಿಕೊಂಡು ಬೀಳುವದು. ದೀಪಗಳು ತೇಲುತ್ತ ಬರುವವು. )

**ಭೂತ-ಪ್ರೇತ**— ರಾಮನಾಮ ಸ್ಮರಣೆಮಾಡುತ್ತಿರುವಳು. ಇನ್ನು ನಾವು ಇಲ್ಲಿರಲಿಕ್ಕಾಗದು! (ಪಲಾಯನ ಮಾಡುವವು. ತುಸು ಹೊತ್ತಿನಲ್ಲಿ ಮನಸಾದೇವಿಯು ಪ್ರವೇಶಿಸುವಳು. )

**ಮನಸಾ**— ಮಲಗಿರುವೆಯೇನಮ್ಮಾ ?

**ಬೇಹುಳೆ**— ಮತ್ತಾರು ಬಂದರು ? (ಮುಖವೆತ್ತಿ ನೋಡಿ ಗುರುತಿಸಿ) ನೀನು ಮತ್ತೇಕೆ ಬಂದೆ ? ನೀನಾರು ? ನಿನ್ನ ವಾಸಸ್ಥಳವಾವುದು ? ನಾನಾದರೊ ನಿನ್ನ ಮಾರ್ಗಪ್ರತೀಕ್ಷೆ ಮಾಡುತ್ತಲೆ ಇದ್ದೆನು.

**ಮನಸಾ**— ಹೀಗಿದ್ದರೆ ಬಾ. ನಾನು ನಿನ್ನನ್ನು ಕರೆದೊಯ್ಯುವೆನು. (ಕೈಚಾಚುವಳು) ನನ್ನ ಕೈಹಿಡಿದುಕೊಂಡು ತೆಪ್ಪದಿಂದ ಇಳಿದು ಬಾ. ನಿನ್ನ ಇಷ್ಟ ವನ್ನು ಸಲ್ಲಿಸುವ ಶಕ್ತಿಯು ನನಗಿಂದಿದ್ದರೂ, ನಾನು ಕಾರ್ಯಸಾಧನೆಯ ಮಾರ್ಗವನ್ನು ತೋರಿಸಿಕೊಡಬಲ್ಲೆನು !

**ಬೇಹುಳೆ**— ಅನುಪಮ ಶಕ್ತಿಯುತಳು ನೀನು ! ಏನನ್ನಾದರೂ ಮಾಡ ಬಲ್ಲೆ ! ನಿನಗೆ ಅಸಾಧ್ಯವಾದ್ದಾವುದೂ ಇಲ್ಲ !

**ಮನಸಾ**— ಈ ಆತ್ಮವಿಶ್ವಾಸವು ನಿನಗಿದೆಯೆ ? ಇದ್ದರೆ ಬೇಗನೆ ಇಳಿದು ಬಾ. (ಬೇಹುಳೆಯು ಅನುಮಾನಿಸಹತ್ತುವಳು. ) ಯಾಕೆ, ಅನುಮಾನಿಸಹತ್ತಿದೆ ಯಲ್ಲ !

**ಬೇಹುಳೆ**— ಮಾತೆ, ನೀನಾರು ?

**ಮನಸಾ**— (ನಕ್ಕು) ನನ್ನ ಪರಿಚಯದಿಂದ ನಿನಗೆ ಪ್ರಯೋಜನವಿಲ್ಲ. ನನ್ನ ಕೈಯನ್ನು ಹಿಡಿದುಕೊಂಡು ಸುಮ್ಮನೆ ಇಳಿದು ಬಾ...

**ಬೇಹುಳೆ**— ನೀನೆಲ್ಲಿರುವೆ? ಯಾವ ಸ್ಥಳದ ನಿವಾಸಿನಿಯು ನೀನು?

**ಮನಸಾ**— ನಾನು ದೇವತೆಗಳ ಅಗಸಗಿತ್ತಿಯು?

**ಬೇಹುಳೆ**— ದೇವತೆಗಳ ಅಗಸಗಿತ್ತಿಯೆ? ದೇವತೆಗಳ?

**ಮನಸಾ**—ಅಹುದು. ದೇವತೆಗಳ ಬಟ್ಟೆಗಳನ್ನು ಒಗೆಯುವವಳು ನಾನು!

**ಬೇಹುಳೆ**— ಯಮರಾಜನ ಮನೆಯ ಅರಿವೆಗಳನ್ನು ಒಗೆಯುತ್ತಿರುವೆಯಾ? ಯಮರಾಜನ ಗುರುತಿದೆಯೆ?

**ಮನಸಾ**— ಎಲ್ಲ ದೇವತೆಗಳ ಬಟ್ಟೆಗಳನ್ನೂ ನಾನೇ ಒಗೆಯುವೆನು.

**ಬೇಹುಳೆ**— ನೀನು ಇರುವುದೆಲ್ಲಿ?

**ಮನಸಾ**— ಸ್ವರ್ಗದಲ್ಲಿ...

**ಬೇಹುಳೆ**— ನಾನೂ ಬರುವೆನು. ಕರೆದುಕೊಂಡು ಹೋಗು. ನಾನು ನೀನು ಹೇಳಿದ ಮಾತನ್ನು ಕೇಳುವೆನು. ನಿನ್ನ ಬಟ್ಟೆ ಒಗೆಯುವ ಕೆಲಸದಲ್ಲಿ ಸಹಾಯಮಾಡುವೆನು. ನನ್ನನ್ನು ಬೇಗನೆ ಅಮೃತದ ಆವಾಸಸ್ಥಾನವಾಗಿದ್ದ ಸ್ವರ್ಗಕ್ಕೆ ಕರೆದೊಯ್ಯು.

**ಮನಸಾ**— ಅಲ್ಲಿ ನೀನು ನಾನು ಹೇಳಿದಂತೆ ಕೇಳಲಿಕ್ಕೆ ಬೇಕು. ಇಲ್ಲವಾದರೆ ನಾನು ನಿನ್ನನ್ನು ಕರೆದೊಯ್ಯಲಾರೆನು.

**ಬೇಹುಳೆ**— ನಾನು ಆಗಲೆ ಹೇಳಿದೆನಲ್ಲ. ಬೇಕಾದರೆ ವಚನ ಕೊಡುವೆನು ತಕೊ.

**ಮನಸಾ**— ಹೀಗಿದ್ದರೆ ಬಾ. (ಮನಸೆಯು ಕೈ ನೀಡುವಳು. ಬೇಹುಳೆಯು ಹೆಣವನ್ನವಚಿಕೊಂಡು ತೆಪ್ಪದಿಂದಿಳಿಯುವಳು. ಇಬ್ಬರೂ ಹೋಗುವರು)

---

## ಎರಡನೆಯ ಪ್ರವೇಶ

(ಕೈಲಾಸದಲ್ಲಿ ಪಾರ್ವತೀ ಪರಮೇಶ್ವರರು ಸರಸಸಲ್ಲಾಪಗಳನ್ನಾಡುತ್ತ ವಿಶ್ರಮಿಸಿರುವರು)

**ಪಾರ್ವತಿ**— ಏಕೊ ನನ್ನ ಮನಸ್ಸಿಗೆ ಸೊಗಸೆನಿಸಲೊಲ್ಲದು! ಭೂಲೋಕದಲ್ಲಿ ಯಾವದಾದರೂ ಅನರ್ಥವುಂಟಾಗಿರಬಹುದೆ? ಯಾವನೊಬ್ಬ ಭಕ್ತನು ಸಂಕಟಗ್ರಸ್ತನಾಗಿ ನನ್ನನ್ನು ಪ್ರಾರ್ಥಿಸಿಕೊಳ್ಳುತ್ತಿರಬಹುದೆ? ಏನಾಗಿರಬಹುದು?

**ಪರಮೇಶ್ವರ**— ಭೂಲೋಕದಲ್ಲಿ ಒಂದು ಉತ್ಪಾತವೆದ್ದಿದೆ!

**ಪಾರ್ವತಿ** — ಅದೇನು?

**ಪರಮೇಶ್ವರ**— ಚಾಂದಸವದಾಗರನು ನಮ್ಮಿಬ್ಬರ ಭಕ್ತನಷ್ಟೆ!

**ಪಾರ್ವತಿ** — ಅಹುದು.

**ಪರಮೇಶ್ವರ**—ಅವನು ಮನಸಾದೇವಿಯ ಪರಮವಿರೋಧಕನೆಂಬದನ್ನೂ ನೀನು ಬಲ್ಲೆ. ಇಬ್ಬರೂ ಹಟಕ್ಕೊಳಗಾಗಿದ್ದಾರೆ. ನಾನು ಮನಸಾದೇವಿಯ ಪೂಜೆ ಮಾಡಲಿಕ್ಕಿಲ್ಲೆಂಬುದು ಚಾಂದಸವದಾಗರನ ಹಟವು. ಚಾಂದಸವದಾಗರನಿಂದ ಪೂಜೆಯನ್ನು ಮಾಡಿಸಿಕೊಂಡೇ ಬಿಡುವೆನೆಂಬುದು ಮನಸಾದೇವಿಯ ಹಟವು.

**ಪಾರ್ವತಿ**— ಮನಸೆಯ ಈ ಹಟವು ಅನ್ಯಾಯವಾದ್ದಲ್ಲವೇನು? ನಾನಂತೂ ಚಾಂದಸವದಾಗರನಿಗೆ ಮನಸೆಯ ಪೂಜೆ ಮಾಡಬೇಡೆಂದು ಉಪದೇಶಿಸಿರುವೆನು. ಚಾಂದನು ಮನಸೆಯ ಪೂಜೆಯನ್ನೇಕೆ ಮಾಡಬೇಕು?

**ಪರಮೇಶ್ವರ**— ನಿನ್ನ–ನನ್ನ ಪೂಜೆಯನ್ನಾದರೂ ಏಕೆಮಾಡಬೇಕು?

**ಪಾರ್ವತಿ**— ಇದು ಅವನ ಇಚ್ಛೆ! ಅವನು ತನ್ನ ಇಚ್ಛೆಯಮೇರೆಗೆ ಬೇಕಾದ ದೇವತೆಗಳ ಪೂಜೆಮಾಡಲೊಲ್ಲನೇಕೆ; ನನ್ನ ಪೂಜೆಯನ್ನು ಮಾಡಲಿಕ್ಕೇಬೇಕೆಂದು ಒತ್ತಾಯಪಡಿಸಲಿಕ್ಕೆ ಯಾವ ದೇವತೆಗೂ ಅಧಿಕಾರವಿಲ್ಲ. ಮತ್ತೊಂದು ಮಾತೆಂದರೆ, ಪೂಜೆಯು ಒತ್ತಾಯದ ವಸ್ತುವಲ್ಲ–ಜುಲುಮೆಯಿಂದ ಮಾಡಿಸಿಕೊಂಡ ಪೂಜೆಯು ಪೂಜೆಯಲ್ಲ. ಭಕ್ತನು ಅಂತಃಕರಣದ ಪ್ರೇರಣೆಯಿಂದ ಮಾಡುವ ಪೂಜೆಯು ಸಾರ್ಥಕವು.

**ಪರಮೇಶ್ವರ**— ಮನಸಾದೇವಿಯ ಪೂಜೆಮಾಡಬೇಕೆಂಬ ಅಂತಃಕರಣದ ಪ್ರೇರಣೆಯು ಚಾಂದನಿಗೆ ಆಗಲೊಲ್ಲದಲ್ಲ!

**ಪಾರ್ವತಿ**— ಇದಕ್ಕಾಗಿ ಮನಸೆಯು ಚಾಂದನಮೇಲೆ ಬಲುಮೆಮಾಡಬೇಕೆ? ಈ ಬಲುಮೆಯಿಂದ ಚಾಂದನು ಅಂತಃಪ್ರೇರಣೆಯನ್ನು ಹೊಂದುವನೆ? ಮನಸೆಯು ಚಾಂದನ ಪೂಜೆಯನ್ನು ಪಡೆಯುವಳೆ?

**ಪರಮೇಶ್ವರ**— ನನ್ನ–ನಿನ್ನ ಆಲೋಚನೆಯು ಏನೇ ಇರಲಿ, ಮನಸಾದೇವಿಯು ಮಾತ್ರ ಚಾಂದನ ಪೂಜೆಯನ್ನು ಹೊಂದಿಯೆ ಬಿಡುವೆನೆಂದು ಹಟ ತೊಟ್ಟಿದ್ದಾಳೆ. ಮುಂದೇನಾಗುವದೊ ನೋಡಬೇಕು.

**ಪಾರ್ವತಿ**— ಭೂಲೋಕದಲ್ಲಿ ಉತ್ಪಾತವೆದ್ದಿದೆಯೆಂದು ಹೇಳಿದಿರಲ್ಲ. ಅದಾವದು ? ವಿಸ್ತರಿಸಿ ನನ್ನ ಮುಂದೆ ಹೇಳೋಣವಾಗಲಿ.

**ಪರಮೇಶ್ವರ**— ಮನಸಾದೇವಿಯು ತನ್ನ ಶಕ್ತಿಯ ಪ್ರಭಾವವನ್ನು ತೋರಿ ಚಾಂದನನ್ನು ಹಣ್ಣಿಗೆ ತರಬೇಕೆಂದು ಮಾಡಿದ್ದಾಳೆ. ಇದಕ್ಕಾಗಿ ಅವಳು ಮಹಾಜ್ಞಾನವನ್ನು ಮೋಸದಿಂದ ಅಪಹರಿಸಿದಳು. ಧನ್ವಂತರಿಯು ಸಾಯುವಂತೆ ಮಾಡಿದಳು. ಚಾಂದನ ಆರುಮಕ್ಕಳನ್ನು ಒಂದೇ ದಿವಸದಲ್ಲಿ ಸರ್ಪದಂಶನಕ್ಕೆ ಬಲಿಗೊಂಡಳು. ಮೊನ್ನೆ ಚಾಂದನ ಇದ್ದೊಬ್ಬ ಏಳನೆಯ ಮಗನನ್ನು ಸರ್ಪ ದಂಶನದಿಂದ ಕೊಲ್ಲಿಸಿದಳು. ಚಾಂದನ ಅರಮನೆಯಲ್ಲಿ ನಡೆದ ಅನರ್ಥಕ್ಕೆ ಪಾರಾವಾರವಿಲ್ಲ. ಬೇಹುಳೆಯ ಸ್ಥಿತಿಯಂತೂ ಬಹು ಭಯಾನಕವಾದುದು.

**ಪಾರ್ವತಿ**— ಬೇಹುಳೆಯೆಂದರೆ ಯಾರು ?

**ಪರಮೇಶ್ವರ**— ಈ ಕಾಲದ ಭೂಲೋಕದ ಸತೀಶಿರೋಮಣಿ ! ಲಕ್ಷ್ಮೀಂದರನ ಹೆಂಡತಿ. ಚಾಂದನ ಸೊಸೆ. ಕೇವಲ ಹದಿನಾಲ್ಕು–ಹದಿನೈದು ವರ್ಷಗಳ ವಯಸ್ಸಿನ ಬಾಲಿಕೆ. ಪತಿಸಮಾಗಮದ ಪ್ರಥಮ ರಾತ್ರಿಯಲ್ಲಿಯೆ ಸರ್ಪದಂಶನದಿಂದ ಮನಸೆಯ ಕೋಪಕ್ಕೆ ಆಹುತಿಯಾದ ಪತಿಯನ್ನು ಕಂಡು ತಲ್ಲಣಿಸಿ ಹೋದಳು. ಕೆಲಹೊತ್ತಿನಮೇಲೆ ತನ್ನ ಪಾತಿವ್ರತ್ಯದ ಪ್ರಬಲಶಕ್ತಿಯಲ್ಲಿ ಆತ್ಮವಿಶ್ವಾಸವನ್ನು ಹೊಂದಿ ಪತಿಯ ಪುನರ್ಜೀವನಕ್ಕೆ ಬದ್ಧಕಂಕಣಳಾದಳು. ತೆಪ್ಪದಲ್ಲಿ ಪತಿಯ ಶವವನ್ನಿಟ್ಟುಕೊಂಡು ಜಲಪ್ರವಾಸಕ್ಕೆ ಹೊರಟಳು.

**ಪಾರ್ವತಿ**— ಸತೀಶಿರೋಮಣಿಯ ಈ ದುಃಖದ ಕತೆಯನ್ನು ನಾನು ಕೇಳಲಾರದವಳಾಗಿರುವೆನು ! ಪ್ರಾಣನಾಥ, ಮುಂದಿನ ಪರಿಣಾಮವೇನು ?

**ಪರಮೇಶ್ವರ**— ಮುಂದಾಗುವುದನ್ನು ಹೇಗೆ ಹೇಳಲಿಕ್ಕಾಗುವದು ?

**ಪಾರ್ವತಿ**— ನಿಮಗೆ ಗೊತ್ತಿರದ್ದಾವುದೂ ಇಲ್ಲ ! ನೀವು ಬುದ್ಧಿ ಪೂರ್ವಕವಾಗಿ ಹೇಳಲೊಲ್ಲಿರಿ !

**ಪರಮೇಶ್ವರ**— ಈಗ ಭವಿಷ್ಯವನ್ನು ಹೇಳುವದು ಬೇಡ. ಬೇಹುಳೆಯ ಭವಿಷ್ಯದ್ಗತಿಯೇನೆಂಬುದನ್ನು ನೀನು ಅಲ್ಪಾವಕಾಶದಲ್ಲಿ ಕಣ್ಮುಟ್ಟ ಕಾಣುವೆ.

**ಪಾರ್ವತಿ**— ಬೇಹುಳೆಯ ಸಂಕಟವನ್ನು ನೀವು ಪರಿಹರಿಸಲಿಕ್ಕೇಬೇಕು! ಸತೀಶಿರೋಮಣಿಯು ತನ್ನ ಪಾತಿವ್ರತ್ಯದ ಪ್ರಬಲಶಕ್ತಿಯಿಂದ ಅಸಾಧ್ಯಸಾಧನೆ

**ಚಾಂದ**—ಒಬ್ಬಳೆ ! ಒಬ್ಬಳೇ ಇಳಿದಳೆ ? ಸರಿಯಾಗಿ ನೋಡು ! ಇನ್ನೂ ನೋಡು ! ನಿಜವಾಗಿಯೂ ಒಬ್ಬಳೇ ಇಳಿದಳೆ ? ಮತ್ತಾರೂ ಇಲ್ಲವೆ ?

**ನೀಲ**— ನೀವೆ ನೋಡಿಕೊಳ್ಳಿರಿ. ಒಬ್ಬರು ಮಾತ್ರ ಅಲ್ಲಿ ಹೋಗುತ್ತಿರುವರು.

**ಚಾಂದ**— ನನಗೆ ಏನೂ ಕಾಣದಂತಾಗಿವೆ ! ದೃಷ್ಟಿ ಶಕ್ತಿಯು ಲೋಪವಾಗಿದೆ ! ನೀನೆ ನೋಡು ಸರಿಯಾಗಿ ಹೇಳು.

**ನೀಲ**— ( ಕಣ್ಣುಗಳನ್ನೊರಿಸಿಕೊಳ್ಳುತ್ತ ) ಮಹಾಪ್ರಭುಗಳೆ, ಒಬ್ಬರು ಮಾತ್ರ ಹೋಗುತ್ತಿರುವರು. ಬಹುತರ ಹೆಂಗಸಾಗಿರಬೇಕು.

**ಚಾಂದ**— ಒಬ್ಬಳೇ ಇರುವಳೆ? ( ದುಃಖಿಸುವನು ) ಚಿಕ್ಕ ಬಾಲೆಯವಳು! ಏನು ಮಾಡ್ಯಾಳು? ಪತಿಯು ಪುನರ್ಜೀವನ ಪ್ರಯತ್ನದಲ್ಲಿ ಅಕೃತಕಾರ್ಯಳಾಗಿದ್ದಾಳೆ! ನೀಲ, ಒಳ್ಳೆ ಅಭಿಮಾನಿನಿಯವಳು. ಲಜ್ಜೆಯಿಂದ ನನಗೆ ಮೋರೆತೋರಲಿಕ್ಕೆ ಹಿಂದೆಗೆಯುತ್ತಿರಬಹುದು ! ಇಲ್ಲಿ ಬಾ ಎಂದು ಕೂಗು.

**ನೀಲ**— ನೌಕೆಯಿಂದಿಳಿದು ಅರಮನೆಯೊಳಗೆ ಹೋದಳು.

**ಚಾಂದ**— ಅವಳು ನನ್ನ ಹತ್ತರ ಬರಲಿಲ್ಲವೆ! ಮೋರೆದಿರುವಿಕೊಂಡು ಹಾಗೇ ಹೋಗಿಬಿಟ್ಟಳೆ? ಹುಗು, ನಿನ್ನ ಕಡೆಗೆ ಏನು ತಪ್ಪಿದೆ? ಮುಖ್ಯವಾಗಿ ನಾನು ದುರ್ದೈವಿಯು! ( ಹಣೆ ಗಟ್ಟಿಸಿಕೊಳ್ಳುವನು. ಮುಂದೆ ನಡೆಯುವನು. ರಮಣಿಯೊಬ್ಬಳು ಅರಮನೆಯ ಅಂಗಣವನ್ನು ಪ್ರವೇಶಿಸುವಳು. ಚಾಂದನು ಮತ್ತೊಂದು ಬಾಗಿಲದಿಂದ ಹಾಯ್ದು ಅವಳ ಬಳಿಗೆ ಹೋಗುವನು. ) ಅಮ್ಮಾ, ಒಬ್ಬಳೇ ಬಂದೆಯಾ? ಲಕ್ಷ್ಮೀಂದರನನ್ನು ಸಂಗಡ ಕರೆತರಲಿಲ್ಲವೆ? ( ಹೆಂಗುಸು ಬುರುಕೆಯನ್ನು ತೆಗೆದು ಚಲ್ಲುವಳು. ಅಪರಿಚಿತ ಹೆಂಗಸನ್ನು ನೋಡಿ ಚಾಂದನು ನಿರಾಶನಾಗಿ ಕಾತರನಾಗುವನು. ವೇಷಾಂತರದಿಂದ ಬಂದ ಮನಸಾದೇವಿಯು ಕೆಲಹೊತ್ತು ಚಾಂದನನ್ನು ನೋಡುತ್ತ ನಿಲ್ಲುವಳು. )

**ಮನಸಾ**— ಮಹಾರಾಜನೆ,

**ಚಾಂದ**— ನೀನಾರವ್ವಾ? ಇಲ್ಲಿಗೇಕೆ ಬಂದಿರುವೆ?

**ಮನಸಾ**— ಭಿಕ್ಷುಕಳು ನಾನು! ಬಿಕ್ಕೆ ಬೇಡುವದಕ್ಕಾಗಿ ನಿನ್ನ ಬಳಿಗೆ ಬಂದಿರುವೆನು! ನೀಡುವಿಯಾ?

**ಚಾಂದ—** ಅಮ್ಮಾ, ಭಿಕ್ಷೆ ಬೇಡುವ ಸಮಯವಿದಲ್ಲ! ಯಾಕೆಂದರೆ, ನನ್ನ ತಲೆಯು ಶಾಂತವಾಗಿಲ್ಲ! ವಿಪರೀತ ಪ್ರಸಂಗದಲ್ಲಿ ಸಿಕ್ಕ ನಾನು ಹುಚ್ಚ ನಾಗಿ ಹೋಗಿದ್ದೇನೆ! ನನ್ನ ಈ ನಗರದಲ್ಲಿ ಹಲವರು ಶ್ರೀಮಂತರಿದ್ದಾರೆ. ನೀನವರ ಬಳಿಗೆ ಹೋಗು. ಭಿಕ್ಷೆ ಬೇಡಿಕೊಳ್ಳು!

**ಮನಸಾ—** ಮಹಾರಾಜನೆ, ನನ್ನ ಬೇಡಿಕೆಯು ಸಾಮಾನ್ಯವಾದ್ದಲ್ಲ! ನೀನು ಮಾತ್ರ ಅದನ್ನು ಸಲ್ಲಿಸಬಲ್ಲೆ!

**ಚಾಂದ—** ನಿನಗೆ ಧನವು ಬೇಕೆ? ಮುತ್ತು ರತ್ನಗಳು ಬೇಕೆ? ನೀಲ, ಇವಳನ್ನು ಬೊಕ್ಕಸದ ಅಧಿಕಾರಿಯ ಬಳಿಗೆ ಕರೆದುಕೊಂಡು ಹೋಗು. ಇವಳು ಬೇಡಿದ್ದನ್ನು ಕೊಡುವಂತೆ ನನ್ನ ಆಜ್ಞೆಯಾಗಿದೆಯೆಂದು ಅವನಿಗೆ ತಿಳುಹು. (ಚಾಂದನು ಭರದಿಂದ ಹೊರಟು ಬೇರೆಕಡೆಗೆ ಹೋಗುವನು. ನೀಲನು ಅವನನ್ನನುಸರಿಸುವನು.)

---

## ಎರಡನೆಯ ಪ್ರವೇಶ

(ಚಂಪಕನಗರದ ಅರಮನೆಯ ಒಂದು ಭಾಗ. ಸನಕೆಯು ದಾಸಿಯ ರಿಂದ ಪರಿವೃತಳಾಗಿ ಮನಸಾದೇವಿಯ ಪೂಜೆ ಮಾಡುತ್ತಿದ್ದಾಳೆ. ಮನಸೆಯೂ ಅಲ್ಲಿದ್ದು, ಸನಕೆಯ ಪೂಜೆಯನ್ನು ನೋಡುತ್ತಿದ್ದಾಳೆ. ಸನಕೆಯು ಹೂವಮಾಲೆ ಯನ್ನು ತಕ್ಕೊಂಡು ಮಂಗಲಘಟಕ್ಕೆ ಹಾಕುವದರಲ್ಲಿದ್ದಳು. ಇಷ್ಟರಲ್ಲಿ ಚಾಂದನೂ ನೀಲನೂ ಬರುವರು.)

**ಚಾಂದ—** ನನ್ನ ಮನೆಯಲ್ಲಿ, ನನ್ನ ಸಮ್ಮುಖದಲ್ಲಿ ಮನಸೆಯ ಪೂಜೆಯೆ? ಆಗದು! ಸರ್ವಥಾ ಆಗದು! (ಸನಕೆಯು ಗಾಬರಿಯಾಗಿ ಸುಮ್ಮ ನಿರುವಳು) ನೀಲ, (ನೀಲನು ಬಳಿಗೆ ಬರುವನು.) ಆ ಘಟವನ್ನೆತ್ತಿ ದೂರ ಚಲ್ಲಿ ಕೊಡು! ಚೂರುಚೂರಾಗಿ ಹೋಗಲಿ!

**ನೀಲ—** (ಕೈಜೋಡಿಸಿ) ಮಹಾಪ್ರಭುಗಳೆ,

**ಚಾಂದ—** ಬೇರೆ ಮಾತಾಡಬೇಡ! ಪ್ರತ್ಯುತ್ತರವು ನನಗೆ ಬೇಕಿಲ್ಲ! ನಾನು ಹೇಳಿದ್ದ ಕೆಲಸವನ್ನು ಮೊದಲು ಮಾಡು!

**ನೀಲ—** ( ತಲೆಯಲ್ಲಾಡಿಸಿ ) ನನ್ನಿಂದಾಗದು! ನಾನು ಮಾಡಲಾರೆನು!

**ಚಾಂದ—** ಮೂರ್ಖನೆ, ಕೊನೆಗೆ ನೀನೂ ಕೂಡ............ಆಗಲಿ, ನಾನೇ ಘಟವನ್ನು ನಾಶ ಮಾಡುವೆನು! (ಮಂಗಲ ಘಟದ ಕಡೆಗೆ ಧಾವಿಸುವನು.)

**ಸನಕೆ—** ( ಅಡ್ಡಬಂದು ) ಬೇಡ ! ಮನಸಾದೇವಿಯ ಅಪಮಾನವಾಗ ಕೂಡದು ! ನೀವು ಇಂತಹ ಕೆಲಸವನ್ನು ಸರ್ವಥಾ ಮಾಡಬೇಡಿರಿ ! (ಚಾಂದನು ಕ್ರೋಧಕಂಪಿತನಾಗಿ ಹಲ್ಲು ಕಡಿಯುತ್ತಿರುವನು.) ಇದುವರೆಗೆ ಸಹಿಸಿದೆನು ! ಎಲ್ಲವನ್ನೂ ಸಹಿಸಿದೆನು ! ಆದರೆ ಇನ್ನು ನನ್ನಿಂದ ಸಹಿಸಲಿಕ್ಕಾಗುವಂತಿಲ್ಲ ! (ಕಣ್ಣೀರುದುರಿಸುವಳು ) ಒಂದಲ್ಲ, ಎರಡಲ್ಲ, ಏಳುಮಕ್ಕಳು ! ಏಳು ಮಕ್ಕಳನ್ನು ಅಕಾಲದಲ್ಲಿ ಅಪಮೃತ್ಯುವಿಗೆ ಆಹುತಿಗೊಟ್ಟ ಮಾತೆಯ ಮನದಳಲಿನ ಸರಿಯಾದ ಕಲ್ಪನೆಯು ನಿಮಗಾಗದು ! ಪುತ್ರವಿರಹದಿಂದುಂಟಾಗತಕ್ಕ ಜನನಿಯ ದುಃಖಾತಿರೇಕವನ್ನು ನೀವರಿಯಿರಿ! ಅಂತೆಯೆ ಹೀಗೆ ಮಾತಾಡುತ್ತಿರುವಿರಿ ! ಮನಸಾದೇವಿಯ ಅಪಮಾನಕ್ಕೆ ಉದ್ಯುಕ್ತರಾಗಿರುವಿರಿ ! ನಿಮ್ಮ ಇಚ್ಛೆಯ ವಿರುದ್ಧವಾಗಿಯೂ—ನೀವು ಮನಸಾದೇವಿಯ ಪ್ರಬಲವಿರೋಧಕರೆಂಬದನ್ನರಿತಿದ್ದರೂ—ನಾನು ಪೂಜೆಗೆ ಏಕೆ ಪ್ರವೃತ್ತಳಾಗಿರಬಹುದೆಂಬುದರ ಇಂಗಿತವನ್ನು ಸೂಕ್ಷ್ಮವಾಗಿ ವಿಚಾರಿಸಿರಿ ! ಮಾತೃಹೃದಯದ ವೈಶಿಷ್ಟ್ಯದ ಕಡೆಗೆ ಲಕ್ಷವಿರಿಸಿರಿ ! ಲಕ್ಷ್ಮೀಂದರನು ಬದುಕಿಬರಬೇಕೆಂಬ ಉತ್ಕಟಾಶೆಯಿಂದ ಪ್ರೇರಿತಳಾಗಿ ಮಾಡುತ್ತಿರುವ ಈ ಪೂಜೆಯನ್ನು ತಡೆಯದಿರ್ರಿ ! ನನ್ನ ಮಗನವನು ! ಅವನ ಪುನರ್ಜೀವನಕ್ಕಾಗಿ ನಾನು ಎಂತಹ ಕಾರ್ಯವನ್ನಾದರೂ ಮಾಡಬಲ್ಲೆನು !

**ಚಾಂದ—** ಲಕ್ಷ್ಮೀಂದರನು ನಿನಗೊಬ್ಬಳಿಗೆ ಮಾತ್ರ ಮಗನೆ ? ನನ್ನ ಮಗನೂ ಅಲ್ಲವೆ ? ಅವನ ಮರಣದಿಂದ ನನಗೆ ದುಃಖವಾಗಿಲ್ಲವೆ ? ಅವನ ಪುನರ್ಜೀವನದ ಆಕಾಂಕ್ಷೆಯು ನನಗಿಲ್ಲವೆ ?

**ಸನಕೆ—** ನಿಮ್ಮ ಮಗನೂ ಅಹುದು. ಆದರೆ ನಿಮಗೆ ಅವನು ಆಟದ ಒಡವೆಯ ಸ್ವರೂಪನು—ಕಷ್ಟಾರ್ಜಿತ ವಸ್ತು ಸ್ವರೂಪನಲ್ಲ ! ನಾನವನನ್ನು ಬಹು ಶ್ರಮವಹಿಸಿ ಪಡೆದಿದ್ದೇನೆ ಸಂರಕ್ಷಿಸಿದ್ದೇನೆ. ಅವನ ಮರಣದಿಂದ ನನಗಾದಷ್ಟು ವ್ಯಥೆಯು ನಿಮಗಾಗದು ! ಪುತ್ರರನ್ನು ಕಳೆದುಕೊಂಡು ಅನುಭವಗೊಂಡಿದ್ದ ಮಾತೆಯು ಮಾತ್ರ ಈಗಳಿನ ನನ್ನ ಹೃದಯವ್ಯಥೆಯ ನಿಜವಾದ ಮರ್ಮವನ್ನು ಅರಿಯಬಲ್ಲಳು! ಅಲ್ಲದೆ, ನಿಮ್ಮಂಥ ಪುರುಷರಿಗೆ ಅದು ಹೊಳೆಯದು ! —

**ಚಾಂದ—** ನಾನರಿಯನೆ ? ಪುತ್ರಶೋಕವು ಎಂತಹದೆಂಬದನ್ನು ನಾನರಿಯನೆ ?

**ಸನಕೆ—** ಇಲ್ಲ ಅರಿದಿಲ್ಲ. ಅರಿಯುವ ಸಂಭವವಿಲ್ಲ ! ನೀವು ಅವನನ್ನು ಹತ್ತು ತಿಂಗಳು ಹತ್ತು ದಿನಗಳವರೆಗೆ ಹೊಟ್ಟೆಯಲ್ಲಿಟ್ಟುಕೊಂಡವರಲ್ಲ ! ದೇಹದ ರಕ್ತವನ್ನು ಹಾಲಿನಲ್ಲಿ ರೂಪಾಂತರಿಸಿಕೊಂಡು ಅವನಿಗೆ ಸ್ತನಪಾನ ಮಾಡಿಸಿದವರಲ್ಲ ! ನೀವು ಅವನ ಲಾಲನೆಮಾಡಿದವರಲ್ಲ, ಪಾಲನೆಮಾಡಿದವರಲ್ಲ ! ಬಹು ದಿನಗಳ ತರುವಾಯ ಮನೆಗೆ ಬಂದ ನೀವು ಆಟದ ಒಡವೆಯೊಂದನ್ನು ಕಂಡಿರಿ ! ಅದರೊಡನೆ ಕೆಲಕಾಲ ಆಟವಾಡಿದಿರಿ ! ಮನಸಾದೇವಿಯ ಪೂಜೆಯ ಪಂದ್ಯಾಟದಲ್ಲಿ ಆ ಆಟದ ಒಡವೆಯನ್ನು ಸೋತು ಕಳೆದುಕೊಂಡು ಬಿಟ್ಟಿರಿ ! ಏನಾದರೂ ಮನಸಾದೇವಿಗೆ ಶಿರಬಾಗಿಸಲಿಲ್ಲವಲ್ಲ ಎಂಬ ಅಭಿಮಾನದಲ್ಲಿ ಪುತ್ರಶೋಕವನ್ನು ಮರೆದಿರುವಿರಿ !

**ಚಾಂದ--** ಎಲೆ ಹತಭಾಗಿನಿ ಹೆಂಗುಸೆ, ಇನ್ನು ನಾನು ಬೇಡೆನ್ನುವದಿಲ್ಲ ! ಪೂಜೆಮಾಡು. ಹಾರವನ್ನರ್ಪಿಸು. ಮನದಣಿಯುವಂತೆ ಪೂಜೆಮಾಡಿ ತೃಪ್ತಳಾಗು! ಪುತ್ರರನ್ನು ಕಳೆದುಕೊಂಡಿದ್ದೆನು ! ಇಂದು ಹೆಂಡತಿಯನ್ನು ಕಳಕೊಂಡಂತಾಯ್ತು ! ಇನ್ನು ನನಗೆ ಸಂಸಾರದ ಯಾವ ಬಂಧನವೂ ಉಳಿಯಲಿಲ್ಲ ! ನೀಲ, ಇನ್ನು ನನ್ನ ರಾಜ್ಯದಲ್ಲಿ ಮನಸೆಯ ಪೂಜೆಗೆ ರಾಜನ ನಿರ್ಬಂಧವಿಲ್ಲವೆಂದೂ, ಬೇಕಾದವರು ಬೇಕಾದಂತೆ ಮನಸೆಯ ಪೂಜೆ ಮಾಡಿಕೊಳ್ಳಬಹುದೆಂದೂ ನಗರದಲ್ಲಿ ಡಂಗುರ ಸಾರಿಸು ! ( ರಭಸದಿಂದ ಹೊರಬೀಳುತ್ತ) ಎಲೊ ಸೇವಕನೆ, ನನ್ನ ಅಪ್ಪಣೆಯನ್ನು ಕೇಳಿಕೊಂಡೆಯಷ್ಟೆ ? ನಿಂತೆಯೇಕೆ ? ಹೊರಬೀಳು. ನನ್ನ ಆಜ್ಞೆಯಂತೆ ನಗರದಲ್ಲೆಲ್ಲ ಡಂಗುರಹೊಯ್ಯಿಸು !—

**ನೀಲ—** (ವಿನೀತನಾಗಿ) ಮಹಾರಾಜರೆ, ನಾನು ಈ ಕೆಲಸವನ್ನೂ ಮಾಡಲಾರೆನು !

**ಚಾಂದ—** (ಹೊರಳಿ ನಿಂತು) ಅದೇಕೆ ? ಮಾಡಲಾರೆಯೇಕೆ ? ಅವಿಧೇಯನಾದ ಸೇವಕನೆ, ಇನ್ನು ನನ್ನ ರಾಜ್ಯದಲ್ಲಿ ಮನಸೆಯ ಪೂಜೆಯ ನಿರ್ಬಂಧದ ಅಪ್ಪಣೆಯನ್ನು ನಡಿಸಲಿಕ್ಕೆ ನನಗೆ ಅಧಿಕಾರವಿದೆಯೆ ? ಇನ್ನು ಯಾವ ಮೋರೆಯಿಂದ ನಾನು ನನ್ನ ಪ್ರಜೆಗಳಿಗೆ ಮನಸೆಯ ಪೂಜೆ ಮಾಡಲಾಗದೆಂದು

ಮಾಡಬಲ್ಲಳೆಂಬುದನ್ನು ಜಗತ್ತಿನ ನಿದರ್ಶನಕ್ಕೆ ತಂದು ಕೊಡಲಿಕ್ಕೇಬೇಕು! ಮತ್ತೊಂದು ಮಾತೆಂದರೆ, ಚಾಂದಸವದಾಗರನು ನಮ್ಮೊರ್ವರ ಪರಮಭಕ್ತನು. ಅವನ ಸಂಕಟ ಪರಿಹಾರ ಮಾಡುವುದು ನಮ್ಮ ಅತ್ಯವಶ್ಯ ಕರ್ತವ್ಯ !

( ಮನಸಾದೇವಿಯು ಬೇಹುಳೆಯುನ್ನು ಕರೆತರುವಳು. ಮನಸೆಯ ಹೇಳಿಕೆಯಂತೆ ಬೇಹುಳೆಯು ಒಂದು ಸ್ಥಳದಲ್ಲಿ ಪತಿಯ ಶವವನ್ನಿರಿಸಿ ಪಾರ್ವತೀ ಪರಮೇಶ್ವರರಿಗೆ ನಮಸ್ಕರಿಸುವಳು. ಪರಮೇಶ್ವರನು ಸೌಭಾಗ್ಯವತಿಯಾಗೆಂದು ಆಶೀರ್ವದಿಸುವನು. )

**ಮನಸಾ—** ತಾತನೆ, ನಾನಿಂದು ಬೇಹುಳೆಯ ಸಲುವಾಗಿ—ಈ ಸತೀ ಶಿರೋಮಣಿಯು ದುಃಖವಿಮೋಚನಕ್ಕಾಗಿ ನಿನ್ನ ಬಳಿಗೆ ಬಂದಿರುವೆನು. ಅನುಗ್ರಹಿಸು. ಈ ಸತಿಯ ಮನೋರಥವನ್ನು ಪೂರ್ಣಮಾಡು.

**ಪರಮೇಶ್ವರ—** ಆಶ್ಚರ್ಯವೆ ಸರಿ! ನೀನು ಬೇಹುಳೆಯ ಹಿತಕ್ಕೋಸುಗ ನನ್ನಬಳಿಗೆ ಬಂದಿರುವುದು ಪರಮಾಶ್ಚರ್ಯವು!

**ಮನಸಾ—**ಇದಕ್ಕಿಂತಲೂ ಈ ಬಾಲೆಯ ಪತಿಭಕ್ತಿಯು—ಪಾತಿವ್ರತ್ಯವು—ಹೆಚ್ಚು ಆಶ್ಚರ್ಯಕರವಾದ್ದು. ನಾನಿದುವರೆಗೆ ಇಂತಹ ಶ್ರೇಷ್ಠತಮ ಪತಿವ್ರತೆಯನ್ನು ಕಂಡವಳಲ್ಲ! ಹದಿನಾಲ್ಕು ವರ್ಷಗಳ ವಯಸ್ಸಿನ ಬಾಲಿಕೆ. ಪತಿವಿಹೀನತೆಯ ಹೊರತು ಯಾವದಕ್ಕೂ ಕೊರತೆಯಿರಲಿಲ್ಲ. ಆದರೂ ಈ ಬಾಲೆಯು ಕೇವಲ ಪತಿಭಕ್ತಿಯಿಂದ ಪತಿಯ ಶವವನ್ನು ಕಾಯುತ್ತ ಏಕಾಕಿಯಾಗಿ ಜಲಪ್ರವಾಸಕ್ಕೆ ಹೊರಟಳು. ಹಗಲು—ರಾತ್ರಿಗಳನ್ನು ನೋಡಲಿಲ್ಲ! ಭೂತಪ್ರೇತಗಳನ್ನು ಲೆಕ್ಕಿಸಲಿಲ್ಲ! ಇಂತಹ ಸತಿಯು ವಿಧವೆಯಾಗಿರುವುದು ಶಕ್ಯವಲ್ಲ! ಅಂತೆಯೆ ನಾನು—ಚಾಂದಸವದಾಗರನ ಕಡುವೈರಿಯಾದ ನಾನು—ಚಾಂದನ ಅಮಂಗಲವನ್ನೆ ಯಾವಾಗಲೂ ಬಯಸಿದ್ದ ನಾನು ಈ ಸತೀಶಿರೋಮಣಿಯ ಕಳವಳವನ್ನು ನೋಡಿ ಸಹಿಸದವಳಾಗಿ, ದೃಢನಿಶ್ಚಯವನ್ನು ನೋಡಿ ಮೆಚ್ಚಿದವಳಾಗಿ ಮಾರ್ಗ ಪ್ರದರ್ಶಕಳಾಗಿ ಬಂದಿರುವೆನು !

**ಪರಮೇಶ್ವರ—** ಚಾಂದ ಸವದಾಗರನು ಈಗಲೂ ನಿನ್ನ ಪೂಜೆಮಾಡಲಿಕ್ಕೆ ಒಪ್ಪುವದಿಲ್ಲವಲ್ಲ!

**ಮನಸಾ—** ಪಿತನೆ, ಈಗ ಚಾಂದಸವದಾಗರನಕಡೆಗೆ ನೋಡಲಿಕ್ಕೆ ನನಗೆ ಅವಕಾಶವಿಲ್ಲ. ನಾನು ಮೊದಲು ಈ ಸಾಧ್ವಿಯ ಸಂತಾಪಪರಿಹಾರವನ್ನು ಕಾಣಬೇಕಾಗಿದೆ.

**ಪರಮೇಶ್ವರ—** ಮಗಳೆ, ನಿನ್ನ ಈ ದೊಡ್ಡ ಮನಸ್ಸನ್ನೂ ಉದಾರ ಬುದ್ಧಿಯನ್ನೂ ಕಂಡು ನನಗೆ ತುಂಬ ಸಂತೋಷವಾಗುತ್ತಿದೆ. ನಾನು ನಿನ ಗೋಸುಗ ಲಕ್ಷ್ಮೀಂದರನ ಪುನರ್ಜೀವನದ ಅಲೌಕಿಕ ಕಾರ್ಯವನ್ನು ನೆರವೇರಿಸುವೆನು. ಎಲ್ಲಿ? ಲಕ್ಷ್ಮೀಂದರನ ಶವವೆಲ್ಲಿ?

**ಬೇಹುಳೆ—** ಇವರು ಇಲ್ಲಿರುವರು. (ಪತಿಯ ಶವವನ್ನು ತೋರುವಳು)

**ಪರಮೇಶ್ವರ—** ಲಕ್ಷ್ಮೀಂದರನೆ ಏಳು. ನಿನ್ನ ಈ ಸತಿಯು ಪಾತಿವ್ರತ್ಯದ ಪ್ರಭಾವದಿಂದಲೂ ನನ್ನ ಮಾನಸ ಕನ್ಯೆಯ ಉದಾತ್ತಬುದ್ಧಿಯಿಂದಲೂ ನೀನಿಂದು ಪುನರ್ಜನ್ಮವನ್ನುಪಡೆದಿರುವೆ. (ಶವದಮೇಲೆ ವರವೀವ ಕರಾಬ್ಜಗಳನ್ನಾಡಿಸುವನು. ಲಕ್ಷ್ಮೀಂದರನು ನಿದ್ದೆಯಿಂದೆಚ್ಚತ್ತವನಂತೆ ಏಳುವನು. ಬೇಹುಳೆಯು ಅತ್ಯಾನಂದದಿಂದ ಪತಿಯಬಳಿಗೆ ಹೋಗಿ ಉಪಚರಿಸುವಳು. ಕೆಲಕಾಲದ ಮೇಲೆ ಈರ್ವರೂ ಹೋಗಿ ಪಾರ್ವತೀ ಪರಮೇಶ್ವರರನ್ನೂ ಮನಸಾದೇವಿಯನ್ನೂ ವಂದಿಸಿ ಆಶೀರ್ವಾದ ಪಡೆಯುವರು.) ಮಗಳೆ, ಇವರು ಭೂಲೋಕಕ್ಕೆ ಹೋಗುವ ದಾರಿಯನ್ನರಿಯರು. ನೀನಿವರನ್ನು ಕರೆದೊಯ್ದು ಭೂಲೋಕಕ್ಕೆ ಮುಟ್ಟಿಸು. ಚಾಂದನು ಕೃತಜ್ಞತೆಯಿಂದ ಪ್ರೇರಿತನಾಗಿ ನಿನ್ನ ಪೂಜೆಯನ್ನು ಮಾಡಲಿಕ್ಕೆ ಒಪ್ಪಬೇಕು. ಒಂದುವೇಳೆ ಅವನು ಒಪ್ಪದಿದ್ದರೆ, ನಾನು ಯಾವುದೊಂದು ಯುಕ್ತಿಯನ್ನವಲಂಬಿಸಿ ನಿನ್ನ ಪೂಜೆಗೆ ಸಿದ್ಧನಾಗುವಂತೆ ಮಾಡುವೆನು. (ಮನಸೆಯೂ ಬೇಹುಳೆಯೂ ಲಕ್ಷ್ಮೀಂದರನೂ ಹೋಗುವರು) ಪ್ರಿಯೆ, ಪಾತಿವ್ರತ್ಯದ ಪ್ರಭಾವವನ್ನೂ ನನ್ನ ಮಾನಸಕನ್ಯೆಯ ಮೇಲ್ಮೆಯನ್ನೂ ನೋಡಿದೆಯಾ? ಹದಿಬದಿಯ ಶಕ್ತಿಯು ಹಿರಿದಿನದೆಂಬದನ್ನು ಜಗತ್ತಿನ ಜನರ ನಿದರ್ಶನಕ್ಕೆ ತಂದುಕೊಡುವದಕ್ಕಾಗಿ ನಾನಿಂದು ಲಕ್ಷ್ಮೀಂದರನಿಗೆ ಜೀವದಾನಮಾಡಿದೆನು.

**ಪಾರ್ವತಿ—** ಬೇಹುಳೆಯು ಅಲೌಕಿಕ ರಮಣಿಯು. ತಮ್ಮ ಲೀಲೆಯು ಅಗಾಧವಾದ್ದು.

---

# ಐದನೆಯ ಅಂಕ

## ಮೊದಲನೆಯ ಪ್ರವೇಶ

( ಚಂಪಕನಗರದ ಬಳಿಯಲ್ಲಿಯ ನದಿಯ ಸೋಪಾನಶ್ರೇಣಿಯ ಹತ್ತಿರ ಚಾಂದ ಸವದಾಗರನೂ ನೀಲನೂ ಬೇಹುಳೆಯ ಮಾರ್ಗಪ್ರತೀಕ್ಷೆ ಮಾಡುತ್ತಿದುವರು )

**ಚಾಂದ**— (ಆನಂದಿತನಾಗಿ) ನೀಲ, ಅಲ್ಲಿ ನೋಡು ನೌಕೆಯೊಂದು ಬರುತ್ತಿದೆ. ನಿಶ್ಚಯವಾಗಿಯೂ ಅದು ಬೇಹುಳೆಯದು! ಆ ಸಾಧ್ವಿಯು ಪತಿಯನ್ನು ಬದುಕಿಸಿಕೊಂಡು ಬಂದಿರುವದರಲ್ಲಿ ಸಂದೇಹವಿಲ್ಲ. ಬೇಹುಳೆ, ಇದೊ ನಾನಿಲ್ಲಿರುವೆನು. ಬರುವೆನು. (ಉನ್ಮಾದನಂತೆ ನೀರಿನಲ್ಲಿ ಹಾರಿಕೊಳ್ಳ ಹೋಗುವನು. ನೀಲನು ತಡೆಯುವನು ) ಎಲೊ, ಸೇವಕನೆ, ಈ ಆನಂದದ ಸಮಯದಲ್ಲಿ ನನ್ನನ್ನು ಅಡ್ಡಗಟ್ಟಬರಬೇಡ. ನಾನು ಹೋಗಿ ಬೇಹುಳೆಯ ಸ್ವಾಗತ ಮಾಡುವೆನು. ಆದರದಿಂದ ಮಗನನ್ನೂ ಸೊಸೆಯನ್ನೂ ಕರೆತರುವೆನು. ಬಿಡು, ನನ್ನ ಕೈ ಬಿಡು! ನಾನು ಈಗಳೆ ಹೋಗಲೆಬೇಕು ! ನೀನಿಲ್ಲಿರಬೇಡ ! ಹೊರಟುಹೋಗು ! (ನೀಲನನ್ನು ದೂಡುವನು. )

**ನೀಲ**— ಮಹಾಪ್ರಭುಗಳೆ, ಹೀಗೆ ಉನ್ಮಾದಗ್ರಸ್ತರಂತೆ ಆಚರಿಸಬೇಡಿರಿ! ಚೆನ್ನಾಗಿ ನೋಡಿರಿ. ಅದು ತೆಪ್ಪವಲ್ಲ. ಸುವರ್ಣನಿರ್ಮಿತ ನೌಕೆಯು.

**ಚಾಂದ**— ಎಲೊ ಮೂರ್ಖನೆ, ಅದು ಬಂಗಾರದ ನಾವೆಯಾದರೇನಾಯಿತು ? ಅದು ಬೇಹುಳೆಯದೇ ಇರಲಿಕ್ಕೆ ಬೇಕು ! ಯಾವಳು ಮೃತಪತಿಯನ್ನು ತಿರುಗಿ ಬದುಕವಂತೆ ಮಾಡಬಲ್ಲಳೊ ಆ ಅದ್ವಿತೀಯ ಶಕ್ತಿಮಯಿಗೆ ಕಟ್ಟಿಗೆಯ ತೆಪ್ಪವನ್ನು ಸುವರ್ಣದ ನೌಕೆಯಲ್ಲಿ ರೂಪಾಂತರಗೊಳಿಸಿಕೊಳ್ಳುವುದು ಅಸಾಧ್ಯವಾದೀತೆ ? ಅದು ನಿಶ್ಚಯವಾಗಿಯೂ ಬೇಹುಳೆಯ ನೌಕೆಯು. ಲಕ್ಷ್ಮೀಂದರನು ತನ್ನ ಜೀವನದಾತೆಯೂ ಅರ್ಧಾಂಗಿನಿಯೂ ಆದ ಬೇಹುಳೆಯೊಡನೆ ಸರಸ ಸಲ್ಲಾಪಗಳನ್ನಾಡುತ್ತ ಆನಂದದಿಂದ ಬರುತ್ತಿರುವನು.

**ನೀಲ**— ದೇವರ ದಯೆಯಿಂದ ಹೀಗೆಯೆ ಆಗಲೆಂದು ನಾನೂ ಆಶಿಸುತ್ತಿರುವೆನು. ಆದರೆ ನೀವು ಈಗ ನದಿಯ ಪ್ರವಾಹದಲ್ಲಿ ಧುಮ್ಮಿಕ್ಕುವದು ಸರಿ

ಯಲ್ಲ. ಅದು ಯುವರಾಜರ ಹಡಗವಾಗಿದ್ದರೆ, ಇಲ್ಲಿಗೆ ಬರಲಿಕ್ಕೇ ಬೇಕು. ಆದರೆ ಹಡಗವು ಈ ಕಡೆಗೆ ಬರಲಿಲ್ಲ. ಮುಂದೆ ಸಾಗಿತು.

**ಚಾಂದ—** ಮುಂದೆ ಸಾಗಿತೆ? ಅಸಂಭವ! ಮುಂದೆ ಸಾಗುವದು ಅಸಂಭವ! ಇಲ್ಲವೆ ಅವರು ನಮ್ಮನ್ನು ನೋಡಿರಲಿಕ್ಕಿಲ್ಲ. ನಮ್ಮನ್ನು ನೋಡದೆ ಹಾಗೆಯೆ ಮುಂದೆ ನಡೆದಿದ್ದರೂ ನಡೆದಿರಬಹುದು! ಮುದ್ದು ಮಗನೆ, ಪ್ರಿಯ ಸೊಸೆಯೆ, ನಾನು ಇಲ್ಲಿರುವೆನು! ನಿಮ್ಮ ದಾರಿಯ ಕಾಯುತ್ತ ನಿಂತಿರುವೆನು! ಹೀಗೆ ಬರ್ರಿ! ಇತ್ತ ಕಡೆಗೆ ಹಡಗವನ್ನು ನಡಿಸಿಕೊಂಡು ಬನ್ನಿರಿ! ನೀಲ, ಅವರಿಗೆ ನನ್ನ ಮಾತುಗಳು ಕೇಳಿಸಲೊಲ್ಲವು! ನಿಶಾನೆಯೆಲ್ಲಿ? ನಿಶಾನೆಯನ್ನು ತೋರಿ ಸನ್ನೆಮಾಡು! ನಿಶಾನೆಯಿಲ್ಲವೆ? ಮೂರ್ಖನೆ ಏಕೆ ತರಲಿಲ್ಲ? ಕೊಂಚವೂ ಮುಂಜಾಗ್ರತೆಯಿಲ್ಲ! ನಾನು ನಿಶಾನೆಯನ್ನು ತೋರುವೆನು. ಸಂಜ್ಞೆಮಾಡಿ ಹಡಗವು ಇತ್ತ ಕಡೆಗೆ ಬರುವಂತೆ ಮಾಡುವೆನು! (ಉತ್ತರೀಯವನ್ನು ಕೈಯಲ್ಲಿ ಹಿಡಿದುಕೊಂಡು ಬೀಸಹತ್ತುವನು) ಬನ್ನಿರಿ, ಹೀಗೆ ಬನ್ನಿರಿ!

**ನೀಲ—** ಮಹಾರಾಜರೆ, ಹಡಗವು ತಿರುಗಲಿಲ್ಲ. ಮುಂದೆ ಹೋಯಿತು.

**ಚಾಂದ—** ಮುಂದೆ ಹೋಯಿತೆ? ಮುಂದೆ ಹೋ-ಯಿ-ತು! (ಹತಾಶನಾಗಿ ನಿಟ್ಟುಸಿರಬಿಡುವನು. ಕೈಯಲ್ಲಿಯ ಉತ್ತರೀಯವು ಜಾರಿ ಬೀಳುವದು.) ನೀಲ, ಹಡಗವು ಹೊರಳಿಬರಲಿಲ್ಲವೆ? ಹಾಗೇ ಮುಂದೆ ಸಾಗಿತೆ?

**ನೀಲ—** ಮಹಾಪ್ರಭುಗಳೆ, ಹಡಗವು ನಿಂತಿತು!

**ಚಾಂದ—** ಎಲ್ಲಿ?

**ನೀಲ—** ಅಲ್ಲಿ ನೋಡಿರಿ. ಅರಮನೆಯ ಬಳಿಯಲ್ಲಿ.

**ಚಾಂದ—** ಈಗ ನನಗೆ ಹೊಳೆಯಿತು. ಬೇಹುಳೆಯೊಬ್ಬಳೆ ಬಂದಿದ್ದಾಳೆ. ಲಕ್ಷ್ಮೀಂದರನ ಜೀವವನ್ನು ಉಳಿಸಿಕೊಳ್ಳಲಿಕ್ಕೆ ಅವಳಿಂದಾಗಿಲ್ಲ! ನೀಲ, ಚನ್ನಾಗಿ ನೋಡು. ಎಷ್ಟು ಜನರು ನೌಕೆಯಿಂದಿಳಿದರೆಂಬದನ್ನು ಸರಿಯಾಗಿ ನೋಡಿ ಹೇಳು. ಒಬ್ಬಳೊ? ಇಬ್ಬರೊ?

**ನೀಲ—** ಒಬ್ಬರು ಮಾತ್ರ! ಹೆಂಗಸೋ ಗಂಡಸೊ ಚನ್ನಾಗಿ ತಿಳಿಯುವುದಿಲ್ಲ!

ಹೇಳಲಿ ? ಇವಳು—ಈ ನನ್ನ ಹೆಂಡತಿ—ಅಗ್ನಿಸಾಕ್ಷಿಯಾಗಿ ಆಜ್ಞಾಪಾಲನೆಯ ಕರಾರನ್ನೊಪ್ಪಿಕೊಂಡ ಸಹಧರ್ಮಿಣಿಯು—ನನ್ನ ಮಾತನ್ನು ನಡಿಸದಿರುವಾಗ, ನಾಗರಿಕರು ನನ್ನ ಆಜ್ಞಾಪಾಲನೆಯನ್ನು ಸರಿಯಾಗಿ ಮಾಡ್ಯಾರೆ ? ಮಹಾಜ್ಞಾನವನ್ನು ಕಳೆದುಕೊಂಡಿದ್ದೆನು. ಧನ್ವಂತರಿ ಗುರುಗಳ ವಿರಹವನ್ನು ಸಹಿಸಿದ್ದೆನು. ಆರು ಮಂದಿ ಮಕ್ಕಳ ಏಕಕಾಲಿಕ ಮರಣದುಃಖವನ್ನು ತಾಳಿಕೊಂಡಿದ್ದೆನು. ಶಿವಭಕ್ತನಾದ ಲಕ್ಷ್ಮೀಂದರನನ್ನೂ ಸತೀ ಶಿರೋಮಣಿಯಾದ ಬೇಹುಳೆಯನ್ನೂ ಕಳೆದುಕೊಂಡು, ಕೇವಲ ಈ ಹೆಂಡತಿಗಾಗಿ ಸಂಸಾರದಲ್ಲಿದ್ದೆನು. ಹಲವು ವಿಧಗಳಾದ ತಾಪಗಳಿಂದ ಜರ್ಜರಿತವಾಗಿ ದೇಹಪಂಜರದಿಂದ ಹಾರಿಹೋಗುವ ಹಂಚಿಕೆಯುಳ್ಳಿರುವ ಪ್ರಾಣವನ್ನು ಬಲಾತ್ಕಾರದಿಂದ ತಡೆದಿರಿಸಿಕೊಂಡಿದ್ದೆನು. ಆದರೆ ಇನ್ನು............ಇನ್ನು ನನಗಾವ ಬಂಧನವೂ ಇಲ್ಲ. ಇನ್ನು ನಾನು ಸಾಂಸಾರಿಕ ಸಕಲ ಬಂಧನಗಳಿಂದ ಮುಕ್ತನು! ಇಂತಹ ಕೇವಲ ನಿರಾಶೆಯ ಸಮಯದಲ್ಲಿ ನಿನಗೆ ಮನಸೆಯ ವಿರೋಧವಾದರೂ ಏಕೆ ಬೇಕು? ಇನ್ನು ಆ ಹಟದಿಂದ ಉಪಯೋಗವೇನು?

**ಮನಸಾ—** ಮನಸಾದೇವಿಗೆ ಜಯಜಯಕಾರವಿರಲಿ!

(ಅರಮನೆಯೊಳಗಿನ ಇತರ ನರನಾರಿಯರು ಮನಸಾದೇವಿಯ ಜಯಜಯಕಾರಮಾಡುತ್ತ ಬರುವರು.)

**ಚಾಂದ:—**ಮಹಾದೇವನೇ, ಇದು ನನ್ನ ಪರಾಭವದ ದ್ಯೋತಕವೆಂದು ಭಾವಿಸದಿರು! ಇವರು ಭೀರುಗಳು, ಕಾಪುರುಷರು! ದುರ್ಬಲಚಿತ್ತರಾದ ಇವರು ಆಗಾಗ್ಗೆ ಒದಗಿದ ವಿಪತ್ಪರಂಪರೆಗಳನ್ನು ನೋಡಿ ಕಂಗೆಟ್ಟು ಹೋಗಿದ್ದಾರೆ. ದೇವಾಧಿದೇವನೂ ಜಗತ್ಪಾಲಕನೂ ಆದ ನಿನ್ನ ಅಲೌಕಿಕ ಶಕ್ತಿಯ ವಿಷಯದಲ್ಲಿ ಸಂದೇಹಗ್ರಸ್ತರಾಗಿ ಅಪದೇವತೆಯ ಜಯಜಯಕಾರಮಾಡಲುದ್ಯುಕ್ತರಾಗಿದ್ದಾರೆ! ನೀನು ಭೀರುಗಳ ದೇವನಲ್ಲ. ಕಾಪುರುಷರ ದೇವನಲ್ಲ, ದುರ್ಬಲಚಿತ್ತರ ದೇವನಲ್ಲ. ನೀನು ಭಕ್ತರೆಂದು ಹೇಳಿಕೊಳ್ಳುತ್ತಿರುವವರನ್ನು ಹಲವು ವಿಧಗಳಾದ ಸಂಕಟಗಳಲ್ಲಿ ನೂಕಿ ಪರೀಕ್ಷಿಸಿ ಉತ್ತೀರ್ಣರಾದವರನ್ನು ಮಾತ್ರ ಮೆಚ್ಚುವೆ. ಅಂತೆಯೆ ನಾನು ಎಂತಹ ಮಹತ್ಸಂಕಟವೊದಗಿದರೂ, ಸತ್ವವನ್ನು ಬಿಡದವನಾಗಿದ್ದೇನೆ. ಅಪದೇವತೆಯನ್ನು ಮೊರೆಹೊಗದವನಾಗಿದ್ದೇನೆ. ಆದರೆ ಇಷ್ಟೊಂದು ಮನೋ

ದಾರ್ಢ್ಯವು ಸಾಮಾನ್ಯ ಮಾನವರಾದ ಇವರೆಲ್ಲರಿಗೆ ಎಲ್ಲಿಂದ ಬರಬೇಕು......ಎಲೆ ಕುರುಡ ಮನಸೆಯೆ, ಅಪದೇವತೆಯೆ, ಇದರಲ್ಲಿ ನಿನಗೆ ಅಭಿಮಾನಾಸ್ಪದವಾದ್ದೇನೂ ಇಲ್ಲ! ಇದು ವರೆಗೆ ಇವರೆಲ್ಲರು ನನ್ನ ಅಧಿಕಾರದ ಬಂಧನದಿಂದ ನಿನ್ನ ಪೂಜೆಮಾಡದಿದ್ದರು. ಇಂದು ನಾನು ನನ್ನ ಅಧಿಕಾರದ ಬಂಧನವನ್ನು ಸಡಲಿಸುತ್ತಲೆ ನಿನ್ನ ಪೂಜೆಗೆ ಪ್ರವೃತ್ತರಾಗುವುದರಲ್ಲಿದ್ದಾರೆ. ಇದಕ್ಕೆ ನಿಜವಾದ ಪೂಜೆಯೆನ್ನಲಿಕ್ಕೆ ಬಂದೀತೆ? ಯಾಕೆಂದರೆ ನೈಜಭಕ್ತಿಯು ರಾಜಶಾಸನವನ್ನು ಗಣಿಸುವದಲ್ಲ. ಭಕ್ತನು ಎಂತಹ ತಡೆಯುಂಟಾದರೂ ಇಷ್ಟದೇವನ ಪೂಜೆ ಮಾಡದೆ, ಅನ್ನಪಾನಗಳನ್ನು ಸ್ವೀಕರಿಸನು. ಭಕ್ತಿಯೆಂದರೇನೆಂಬದನ್ನರಿಯದ ಈ ಕುರಿಗಳ ಪೂಜೆಯಿಂದ ನೀನು ಸಂತುಷ್ಟಳಾಗುವೆಯಾ? ಅಭಿಮಾನಪಡುವೆಯಾ?

**ಸನಕ:**—ನೀವೇನೇನೊ ಮಾತಾಡುತ್ತಿರುವಿರಿ! ಈಗ ಈ ಮಾತುಗಳಿಂದ ಉಪಯೋಗವೇನು? ಅದ್ಭುತಶಕ್ತಿಸಂಪನ್ನಳಾದ ಮನಸಾದೇವಿಯನ್ನು ಹೀಗೆ ಹಳಿಯುವದರಿಂದ ಹಿತವಾದೀತೆ?

**ಚಾಂದ:**—(ಹೆಂಡತಿಯ ಹತ್ತರ ಹೋಗಿ) ರಾಜ್ಞಿಯವರೆ, ಪತಿಭಕ್ತಿ ಪರಾಯಣರಾದ ಸಹಧರ್ಮಿಣಿಯವರೆ, ಹಿತಾಹಿತಗಳ ಜ್ಞಾನವು ನನಗಿಲ್ಲ. ನಿಮಗೆ ಮಾತ್ರ ಚನ್ನಾಗಿ ಗೊತ್ತಾಗಿದೆ! ಇಂದು ನೀವು ಮನಸೆಯ ಪೂಜೆ ಮಾಡುವಿರಿ. ನಾಳೆ ಮತ್ತೊಬ್ಬ ಅಪದೇವತೆಯ ಪೂಜೆಗೆ ಪ್ರವೃತ್ತರಾಗುವಿರಿ. ನಾಡದು ಇನ್ನೊಬ್ಬ ಉಪದೇವತೆಯ ಪೂಜೆಗಾರಂಭಿಸುವಿರಿ. ಹೀಗೇಕೆಂದು ಕೇಳಿದರೆ, ನಾನು ಲಕ್ಷೀಂದರನನ್ನು ಹತ್ತುತಿಂಗಳು ಹತ್ತು ದಿವಸ ಹೊಟ್ಟೆಯಲ್ಲಿಟ್ಟುಕೊಂಡಿದ್ದೆನೆಂಬ ನೆವವನ್ನು ಹೇಳುವಿರಿ! ನಾನಾದರೊ ಲಕ್ಷ್ಮೀಂದರನು ನನ್ನ ಆಟಗೆಯ ಒಡವೆಯ ಸ್ವರೂಪನೆಂದು ಭಾವಿಸಿದ್ದೆನು! ಆದರೆ ಬೇಹುಳೆಯು? ಅವಳೂ ನನ್ನಂತೆಯೆ ಭಾವಿಸಿದ್ದಳೆ? ಇಲ್ಲವೆ ಬೇರೊಂದು ವಿಧವಾಗಿ ಭಾವಿಸಿರಬೇಕೆ? ಅವಳೇಕೆ ನಿನ್ನಂತೆಯೆ ಕಣ್ಣೀರ ಸುರಿಸುತ್ತ ಮನಸೆಯನ್ನು ಮೊರೆ ಹೊಗಲಿಲ್ಲ? ಪದ್ಮಗಳ ಹಾರವನ್ನು ಮಾಡಿಕೊಂಡು ಆ ಕುರುಡ ಪದ್ಮೆಯ ಕೊರಳ್ಲಿ ಹಾಕಲಿಕ್ಕೆ ಧಾವಿಸಲಿಲ್ಲ? ಬಾಲೆಯವಳು! ನಿಮ್ಮಂತಹ ಪ್ರಗಲ್ಭವಿಚಾರಗಳು ಅವಳಿಗೆ ಹೇಗೆ ಉಂಟಾಗಬೇಕು? ಅಂತೆಯೆ ಅವಳು ಅರಮನೆಯಲ್ಲಿ

ಕುರಿತು ರೋದಿಸುವದನ್ನೂ ಮನಸೆಯು ಪೂಜೆಮಾಡುವದನ್ನೂ ಬಿಟ್ಟು ಸ್ವಾಮಿಯ ಶವದ ಪರಿಚಾರಿಕೆಯಾಗಿ ಹೊರಟಿರಬೇಕು! ಹಗಲು ರಾತ್ರಿಗಳನ್ನು ಲೆಕ್ಕಿಸದೆ, ನಗರ-ಅರಣ್ಯಗಳ ಭೇದವನ್ನು ಯೋಚಿಸದೆ, ಭೂತಪ್ರೇತಗಳ ಭಯವನ್ನು ಮನಸ್ಸಿನಲ್ಲಿ ತಾರದೆ, ಪತಿಯ ಹೆಣದ ಸಹಚರಿಯಾಗಿ ಜಲಪ್ರವಾಸಕ್ಕೆ ಸಿದ್ಧಳಾಗಿರಬೇಕು! ಅಲ್ಲವೆ? ಮತ್ತೊಂದು ಮಾತೆಂದರೆ, ಅವಳೂ ಲಕ್ಷ್ಮೀಂದರನನ್ನು ನನ್ನಂತೆಯೇ ಅಕಸ್ಮಾತ್ತಾಗಿ ಅಟವಿ ವಸ್ತುವಿನೋಪಾದಿಯಲ್ಲಿ ಪಡೆದವಳು! ಮಹಾಪ್ರಾಜ್ಞರಿಯವರೆ, ನಾನೆನ್ನುವದು ನಿಜವಲ್ಲವೆ? ಬೇಹುಳೆಯು ಲಕ್ಷ್ಮೀಂದರನನ್ನು ಹತ್ತು ತಿಂಗಳು ಹತ್ತು ದಿನ ಹೊಟ್ಟೆಯಲ್ಲಿ ಹೊತ್ತವಳಲ್ಲ! ಅಂದಬಳಿಕ ಅವಳಿಗೆ ಮನಸೆಯ ಪೂಜೆಯ ಸುಲಭ ಮಾರ್ಗವು ಹೇಗೆ ಕಾಣಿಸಬೇಕು? ನೀವು ಲಕ್ಷ್ಮೀಂದರನನ್ನು ಹತ್ತು ತಿಂಗಳು ಹತ್ತು ದಿನ ಹೊಟ್ಟೆಯಲ್ಲಿ ಹೊತ್ತದ್ದರಿಂದಲೆ, ನಿಮಗೆ ಮನಸೆಯ ಪೂಜೆಯ ಈ ಸರಳ ದಾರಿಯು ಗೊತ್ತಾಯಿತಲ್ಲವೆ? (ಸನಕೆಯು ಕಡೆಗೆ ನೋಡುತ್ತ ಕ್ಷಣಕಾಲ ಸುಮ್ಮನಿರುವನು. ಸನಕೆಯು ಅಧೋವದನೆಯಾಗಿರುವಳು.) ಇಂದಿನಿಂದ ನೀನು ನನ್ನ ಪಾಲಿಗೆ ಇಲ್ಲದಾದೆ! ನಿನಗೂ ನನಗೂ ಸಂಬಂಧವೇ ಇಲ್ಲದಾಯಿತು! ಯಾಕೆಂದರೆ ನೀನು ನನ್ನನ್ನು ಹತ್ತು ತಿಂಗಳು ಹತ್ತು ದಿನ ಹೊತ್ತವಳಲ್ಲ! ನಾನು ನಿನ್ನನ್ನು ಹತ್ತು ತಿಂಗಳು ಹತ್ತು ದಿವಸ ಹೊತ್ತವನಲ್ಲ!

**ನೀಲ**— (ಚಾಂದನ ಪಾದಗಳ ಮೇಲೆ ಬಿದ್ದು) ಮಹಾಪ್ರಭುಗಳೆ, ನಡೆಯಿರಿ. ಇನ್ನು ಇಲ್ಲಿರುವದು ಬೇಡ! ಈ ಅರಮನೆಯೂ ರಾಜ್ಯವೂ ನಮಗೆ ಬೇಡ! ನಾವೀರ್ವರೂ ಎಲ್ಲಿಗಾದರೂ ಹೊರಟು ಹೋಗೋಣ!

**ಚಾಂದ**— ಅದೇಕೆ?

**ನೀಲ**—(ಎದ್ದು ನಿಂತು) ಇನ್ನು ಎರಡೇ ಎರಡು ದಿವಸ ಇಲ್ಲಿದ್ದರೆ, ನೀವು ನಿಶ್ಚಯವಾಗಿಯೂ ಹುಚ್ಚರಾಗಿ ಹೋಗುವಿರಿ!

**ಚಾಂದ**— ಇವರೆಲ್ಲರೂ ನನ್ನನ್ನು ಅರಮನೆಯಿಂದ ಹೊರಗೆ ಹಾಕಿ ದೇಶಾಂತರಕ್ಕೆ ಅಟ್ಟುವ ಒಳಸಂಚು ನಡಿಸಿರುವಂತೆ ಕಾಣುತ್ತಿದೆ! ಆದರೆ ನಾನು ಇವರ ಈ ಗುಪ್ತ ಕಾರಸ್ಥಾನಕ್ಕೆ ಬಲಿಬೀಳತಕ್ಕವನಲ್ಲ! ನಾನು ಈ ದೇಶದ ರಾಜನಲ್ಲವೆ? ರಾಜ್ಯವನ್ನು ಬಿಟ್ಟು ಹೋಗಲೇಕೆ? ನನಗೆ ವಿರೋಧಿಗಳಾದ ಎಲ್ಲರನ್ನೂ

ಚೆನ್ನಾಗಿ ಶಿಕ್ಷಿಸಿ, ನಾನು ನನ್ನ ಅಧಿಕಾರವನ್ನು ತೋರ್ಪಡಿಸಲಿಕ್ಕೆ ಬೇಕು! ನನ್ನ ಮನೆಯಲ್ಲಿ ನನ್ನ ಸಮಕ್ಷಮದಲ್ಲಿ ಗೃಹದೇವರಾದ ಪಾರ್ವತೀಪರಮೇಶ್ವರರ ಅವಮಾನಮಾಡಿ ಮನಸೆಯ ಪೂಜೆ ಮಾಡುತ್ತಿರುವ ಧರ್ಮದ್ರೋಹಿಗಳನ್ನು ರಾಜಶಾಸನದ ಭಯಂಕರ ಶಿಕ್ಷೆಗೆ ಗುರಿಮಾಡಲಿಕ್ಕೆ ಬೇಕು!

**ನೀಲ**—ಬೇಡ! ಮಹಾಪ್ರಭುಗಳೆ, ಅವಿಚಾರಕ್ಕೊಳಗಾಗಬೇಡಿರಿ!

**ಚಾಂದ**—ಏಕೆ ಹೀಗೆ ಮಾಡಲಾಗದು? ಯಾಕೆ ನಾನು ನಿಷ್ಕಂಟಕನಾಗಕೂಡದು? ನನ್ನ ಸೈನಿಕರೂ ಇವರ ಒಳಸಂಚಿನಲ್ಲಿ ಸೇರಿರುವರೇನು? (ನೀಲನು ಉತ್ತರ ಕೊಡದಿರುವನು) ದುರ್ಯೋಧನನು ನನ್ನ ಆಜ್ಞಾಭಂಗ ಮಾಡಲಿಕ್ಕೆ ಸಿದ್ಧನಾಗಿರುವನೆ?

**ನೀಲ**—ಮಹಾಪ್ರಭುಗಳೆ, ಕಲಹಿಸುತ್ತ ಕುಳಿತಿರುವದರಲ್ಲಿ ಹಿತವಿಲ್ಲ! ಯಾವನು ವಿಧೇಯನು, ಯಾವನು ಅವಿಧೇಯನು ಎಂಬದನ್ನು ವಿಚಾರಿಸುವದರಲ್ಲಿ ಮನಸ್ತಾಪವಲ್ಲದೆ ಬೇರೆ ಪ್ರಯೋಜನವಿಲ್ಲ! ಆದುದರಿಂದ ಈಗ ನೀವು ಆ ವಿಚಾರವನ್ನು ಮಾಡಬೇಡಿರಿ. ಬೇರೆ ಯಾವುದೊಂದು ಸ್ಥಳಕ್ಕೆ ಹೋಗಿರಿ. ನಾನೂ ನಿಮ್ಮೊಡನೆ ಬರುವೆನು. ನಿಮ್ಮ ಸೇವೆ ಮಾಡಿಕೊಂಡಿರುವೆನು. ಅಲ್ಲಿ ನೀವು ನಿಶ್ಚಿಂತರಾಗಿದ್ದು, ಪಾರ್ವತೀಪರಮೇಶ್ವರರ ಪೂಜೆ ಮಾಡಿ ಮನಶ್ಶಾಂತಿಯನ್ನು ಪಡೆಯುವಿರಂತೆ.

**ಚಾಂದ**—ಈ ಮನೆಯನ್ನು ಬಿಟ್ಟು ಹೇಗೆ ಹೊರಡಲಿ? ನನ್ನ ಕಾಲುಗಳೇ ಏಳವು! ನನ್ನ ಪೂರ್ವಜರೆಲ್ಲರೂ ಈ ಮನೆಯಲ್ಲಿಯೆ ಹುಟ್ಟಿ ಬೆಳೆದು ದೊಡ್ಡವರಾಗಿದ್ದಾರೆ. ತಮ್ಮ ಕರ್ತೃತ್ವಶಕ್ತಿಯನ್ನು ಪ್ರಕಟಿಸಿ ಕೀರ್ತಿಮಂಡಿತರಾಗಿ ದೇಹವಿರಿಸಿದ್ದಾರೆ. ಅವರ ಚರಣರಜದಿಂದ ಪವಿತ್ರವಾಗಿದ್ದ ಈ ಮನೆಯನ್ನು ನಾನು ಹೇಗೆ ತ್ಯಜಿಸಿಹೋಗಲಿ? ಇಷ್ಟದೇವರಾದ ಪಾರ್ವತೀಪರಮೇಶ್ವರರ ಉಜ್ವಲ ಮೂರ್ತಿಗಳಿಗೆ ಅಧಿಷ್ಠಾನವಾಗಿದ್ದ ಈ ಪುಣ್ಯತೀರ್ಥವನ್ನು ಹೇಗೆ ಬಿಟ್ಟು ಹೊರಡಲಿ?

**ನೀಲ**—ಮಹಾಪ್ರಭುಗಳೆ, ಪ್ರಸಂಗವೆ ಹಾಗೆ ಬಂದಿರುವದು! ಬೇರೆ ಉಪಾಯವಿಲ್ಲದಾಗಿದೆ!

**ಚಾಂದ**—ಆರುಮಕ್ಕಳಿದ್ದರು. ಈ ಮನೆಯಲ್ಲಿಯೆ ಅವರೆಲ್ಲರನ್ನು ಕಳ ಕೊಂಡೆನು! ಲಕ್ಷ್ಮೀಂದರನಿದ್ದನು. ಅವನನ್ನು ಈ ಮನೆಯಲ್ಲಿಯೇ ಕಳೆದುಕೊಂ ಡೆನು! ಇಂದು ಈ ಮನೆಯು ಸ್ಮಶಾನವಾಗಿ ಹೋಗಿದೆ! ಆದರೂ ಈ ಮನೆಯ ಮಾಯೆಯಿಂದ ಮುಕ್ತನಾಗಲಾರದವನಾಗಿದ್ದೇನೆ. ಹೀಗೇಕೆ ಆಗಿರಬಹುದು? (ಕ್ಷಣಕಾಲ ಗೇನಿಸುವನು) ಹಾ ಈಗ ಹೊಳೆಯಿತು! (ಚಪ್ಪಾಳೆ ಬಾರಿಸುವನು) ನನ್ನ ಆಶೆಯ ಒಂದೇ ಒಂದು ವಸ್ತುವು ಇನ್ನೂ ಜೀವಿಸಿದೆ! ನಾನದರ ಮಾರ್ಗ ಪ್ರತೀಕ್ಷೆಮಾಡುತ್ತಿರುವೆನು! ಬೇಹುಳೆ ಅಂಥಿಂಥ ಬಾಲೆಯಲ್ಲ! ಮೃತಪತಿಯನ್ನು ಬದುಕಿಸಿಕೊಂಡು ಬರುವೆನೆಂದು ನಿರ್ಧಾರದಿಂದ ಹೇಳಿಕೋಗಿದ್ದಾಳೆ. ಸಾವಿತ್ರೀ ಸಮಾನಳಾದ ಆ ಸತೀಶಿರೋಮಣಿಯ ಮಾತಿನಲ್ಲಿ ನಂಬಿಗೆಯಿಡಲಾಗದೆ? ಅವಳ ದಾರಿಯನ್ನು ಕಾಯಲಾಗದೆ?

**ನೀಲ**— ಹೀಗಿದ್ದರೆ ಶಾಂತರಾಗಿರಿ. ಬೇಹುಳೆಯಮ್ಮನವರ ಮಾರ್ಗ ಪ್ರತೀಕ್ಷೆ ಮಾಡುತ್ತ ಸುಮ್ಮನಿರಿ.

**ಚಾಂದ**— ಸುಮ್ಮನಿರುವದು ನನ್ನಿಂದಾಗದು! ಧರ್ಮದ್ರೋಹಿಗಳಿಗೆ ಯೋಗ್ಯ ಪ್ರಾಯಶ್ಚಿತ್ತವಾಗಲೆಬೇಕು! (ಒರೆಯಲ್ಲಿಯ ಖಡ್ಗವನ್ನು ಹೊರದೆಗೆ ಯುವನು) ನೀಲ, ಇದು ನೋಡು. ನನ್ನೀ ಖಡ್ಗವು ಧರ್ಮದ್ರೋಹಿಗಳ ರಕ್ತ ಪಾನಕ್ಕಾಗಿ ಹಾತೊರೆಯುತ್ತಿದೆ! (ಹೆಂಡತಿಯ ಕಡೆಗೆ ಹೋಗುವನು)

**ನೀಲ**—(ಗಾಬರಿಯಾಗಿ) ಮಹಾನರ್ಥವು! ಭಯಂಕರ ಉತ್ಪಾತವು!

**ಸನಕೆ**—ಮಹಾರಾಜರೆ, ಸ್ವಲ್ಪ ತಡೆಯಿರಿ. ಶಾಂತಚಿತ್ತಳಾಗಿ ದೇವಿಯ ಪೂಜೆಯನ್ನು ಕೊನೆಗಾಣಿಸಲಿಕ್ಕೆ ಅನುವುಗೊಡಿರಿ. ಬಳಿಕ ನಿಮ್ಮ ಶಿಕ್ಷೆಯನ್ನು ಅನುಭವಿಸಲಿಕ್ಕೆ ಸಂತೋಷದಿಂದ ಸಿದ್ಧಳಾಗುವೆನು!

**ಚಾಂದ**—(ಖಡ್ಗವನ್ನು ಝಳಪಿಸಿ) ಆಗದು! ಮನಸೆಯ ಪೂಜೆಯು ಕಡೆಗಾಣಲಾಗದು! ಪೂಜೆಯು ಅಸಂಪೂರ್ಣವಾಗಿರುವಾಗಲೆ ಪೂಜಾರಿಣಿಯಾದ ನಿನ್ನನ್ನು ಯಮಸದನಕ್ಕೆ ಅಟ್ಟಿಬಿಡುವೆನು! ಪತಿಯ ಆಜ್ಞೆಯನ್ನು ಮೀರಿ ಮನ ಸೆಯ ಪೂಜೆಗೆ ಪ್ರವೃತ್ತಳಾಗಿ ಧರ್ಮದ್ರೋಹಿನಿಯಾದ ನಿನಗೆ ಸರಿಯಾದ ಪ್ರಾಯಶ್ಚಿತ್ತವನ್ನು ವಿಧಿಸುವೆನು!

**ಸನಕೆ**—(ನೊಳಕಾಲೂರಿ ಕುಳಿತು) ಆಗಲಿ, ನಾನು ಸಿದ್ಧಳಿರುವೆನು !

**ಚಾಂದ**—(ಖಡ್ಗವನ್ನೆತ್ತಿ ಹೊಡೆಯ ಹೋಗುವನು. ಕೈನಡುಗುವುದು. ಕತ್ತಿಯನ್ನು ದೂರ ಬಿಸಾಡುವನು) ನಿನ್ನನ್ನು ಕೊಲ್ಲಲಿಕ್ಕೆ ಮನಸ್ಸಿಲ್ಲದಾಗಿದೆ. ಹೋಗು. ಮನಸೆಯ ಪೂಜೆ ಮಾಡು. ಇನ್ನು ನಾನು ನಿನಗೆ ಪ್ರತಿಬಂಧ ಮಾಡುವದಿಲ್ಲ. ನೀನು ಲಕ್ಷ್ಮೀಂದರನನ್ನು ಹಡೆದವಳು. ನಾನು ಮಾತೆಯ ಹೃದಯದ ವೈಶಿಷ್ಟ್ಯವನ್ನು ಅರಿಯುವವನು. ಮಕ್ಕಳ ಹಿತವು ಏತರಲ್ಲಿದೆ ಎಂಬುದು ತಂದೆಗಿಂತಲೂ ತಾಯಿಗೆ ಚನ್ನಾಗಿ ತಿಳಿಯುತ್ತಿದ್ದರೂ ತಿಳಿಯುತ್ತಿರಬಹುದು ! ಏನೇ ಇರಲಿ, ಇನ್ನು ನಾನು ನಿನ್ನ ಉಸಾಬರಿಗೆ ಬರುವದಿಲ್ಲ ! ನಿನ್ನ ಮಾರ್ಗವನ್ನು ನೀನು ಕಂಡುಕೊಳ್ಳು ! ನನ್ನ ದಾರಿಯನ್ನು ನಾನು ನೋಡಿಕೊಳ್ಳುವೆನು ! ದೇವಾಧಿದೇವನಾದ ಮಹಾದೇವನೆ, ನಾನು ಹತಬುದ್ಧನಾಗಿ ಹೋಗಿದ್ದೇನೆ ! ಕೃಪಾವಶನಾಗಿ ಸರಿಯಾದ ದಾರಿಯನ್ನು ತೋರಿ ಸಲುಹು !

(ಬೇಹುಳೆಯೂ ಲಕ್ಷ್ಮೀಂದರನೂ ಪ್ರವೇಶಿಸುವರು. ಚಾಂದನೂ ಸನಕೆಯೂ ಆನಂದಾತಿಶಯದಿಂದ ಅವರನ್ನಾಲಿಂಗಿಸ ಹೋಗುವರು)

**ಬೇಹುಳೆ**—ಮಾವಂದಿರೆ, ಸ್ವಲ್ಪ ತಡೆಯಿರಿ. ಅತ್ತೆಯವರೆ, ತುಸ ನಿಲ್ಲಿರಿ! ನನ್ನ ಈ ಪತಿದೇವರಿಗೆ ಪುನರ್ಜೀವನವನ್ನಿತ್ತವರಾರೆಂಬದನ್ನು ಬಲ್ಲಿರಾ ? ಇವರಿಗೆ ಪ್ರಾಣದಾನಮಾಡಲಿಕ್ಕೆ ಅನ್ಯ ದೇವತೆಗಳಾರೂ ಮುಂದರಿಯಲಿಲ್ಲ. ಮನಸಾದೇವಿಯು ಮಾತ್ರ ನನ್ನ ವಿಷಯದಲ್ಲಿ ಮಮತಾವಶಳಾಗಿ, ಇವರಿಗೆ ಜೀವದಾನ ಮಾಡಿರುವಳು. ಇದಕ್ಕಾಗಿ ನೀವು ಮನಸಾದೇವಿಯ ಪೂಜೆಯನ್ನು ಮಾಡಲಿಕ್ಕೆ ಬೇಕು. ಇದಕ್ಕೆ ನೀವು ಒಪ್ಪದಿದ್ದರೆ, ನಾವು ಈ ಮೊದಲೆ ಮನಸೆಗೆ ವಚನ ಕೊಟ್ಟಿರುವಂತೆ ಪ್ರಾಣತ್ಯಾಗ ಮಾಡಬೇಕಾಗುವದು.

**ಚಾಂದ**—ಪ್ರಾಣತ್ಯಾಗಮಾಡಬೇಕಾಗುವದೆ ?

**ಬೇಹುಳೆ**—ಅಹುದು.

**ಚಾಂದ**—ಮನಸೆಯ ಉಪಟಳದಿಂದ ನಾನು ನಿಮ್ಮನ್ನು ಸಂರಕ್ಷಿಸುವೆನು!

**ಬೇಹುಳೆ**—ಸಾಧ್ಯವಲ್ಲದ ಮಾತಿದು ! ಮನಸಾದೇವಿಯ ಶಕ್ತಿಯು ಅಲೌಕಿಕವಾದ್ದು. ಅವಳ ದಿವ್ಯಶಕ್ತಿಯೊಡನೆ ನಿಮ್ಮ ಮಾನವೀಯ ಪರಿಮಿತ

ಶಕ್ತಿಯು ಹೋರಾಡಿ ಗೆದೆಯಲಾರದು ! ಕೊನೆಗೆ ನೀವು ಅವಳ ವಶ್ಯತೆಯನ್ನು ಒಪ್ಪಿಕೊಳ್ಳಲೆಬೇಕು !

**ಚಾಂದ**—ಅವಳೇನು ಮಾಡುವಳೊ ನೋಡಿ ಬಿಡುವೆನು ! ನೀವು ಅವಳಿಗೆ ಹೆದರುವ ಕಾರಣವಿಲ್ಲ !

**ಬೇಹುಳೆ**—ಮಾವಂದಿರೆ, ಈವರೆಗಿನ ಅನುಭವವು ಸಾಕಾಗಿಲ್ಲವೇನು ? ಇನ್ನೂ ವಿಷಪರೀಕ್ಷೆಯ ಮನಸ್ಸು ಮಾಡುವದು ತುಂಬ ಅಪಾಯಕರವು !

**ಸನಕೆ**—ನಾನು ಮನಸಾದೇವಿಯ ಪೂಜೆಯನ್ನು ಮಾಡುವೆನು. ಷೋಡಶೋಪಚಾರಗಳಿಂದ ಸಾಂಗವಾಗಿ ಪೂಜೆಮಾಡಿ ಸಂತುಷ್ಟಗೊಳಿಸುವೆನು.

**ಬೇಹುಳೆ**—ಮನಸಾದೇವಿಗೆ ನಿಮ್ಮ ಪೂಜೆಯು ಬೇಕಿಲ್ಲ. ಮಾವಂದಿರ ಪೂಜೆಯು ಬೇಕಾಗಿದೆ.

**ಚಾಂದ**— ಅವಳಿಗೆ ನನ್ನ ಪೂಜೆ ಬೇಕೇ ಕುಹಕಿನಿಯವಳು! ನಿಮಗೆ ಮೋಹನ ಮಂತ್ರವನ್ನೆರಚಿದ್ದಾಳೆ.

**ಬೇಹುಳೆ:**— ಮಾವಂದಿರೆ, ಹೀಗೆನ್ನದಿರಿ! ದೇವಿಯವಳು! ಮಹದ್ಗುಣಮಂಡಿತೆಯವಳು !

**ಸನಕೆ:**—ಪ್ರಾಣನಾಥ, ಪ್ರಸನ್ನರಾಗಿರಿ. (ಚಾಂದನು ಉತ್ತರ ಕೊಡದೆ ಹೊರಟು ಹೋಗುವವರಲ್ಲಿರುವನು).

**ಲಕ್ಷ್ಮೀಂದರ:**— ಅಮ್ಮಾ, ಹೇಗಾದರೂ ಮಾಡಿ ಅಪ್ಪನನ್ನು ಮನಸಾದೇವಿಯ ಪೂಜೆಗೆ ಒಡಂಬಡಿಸಲಿಕ್ಕೆಬೇಕು.

**ಸನಕೆ:**— (ಚಾಂದನ ಹತ್ತರ ಮೊಳಕಾಲೂರಿ ಕುಳಿತು ಕೈಜೋಡಿಸಿ) ಪ್ರಿಯತಮ, ನಿಷ್ಠುರರಾಗಬೇಡಿರಿ! ಅನುಗ್ರಹಿಸಿರಿ!

**ಬೇಹುಳೆ:**— (ಮೊಳಕಾಲೂರಿ ಕುಳಿತು ಕೈಮುಗಿದು) ಮಾವಂದಿರೆ, ದಯವಿಟ್ಟು ಒಪ್ಪಿಕೊಳ್ಳಿರಿ !

**ಸನಕೆ:**— ಪ್ರಾಣನಾಥರೆ, ದಯಮಾಡಿರಿ. ಏಕಮಾತ್ರ ಪುತ್ರನ ಭಾವೀ ಹಿತವನ್ನೂ, ವಂಶಾಭಿವೃದ್ಧಿಯನ್ನೂ ಮನದಂದು ಮನಸಾದೇವಿಯ ಪೂಜೆಗೆ ಸಿದ್ಧರಾಗಿರಿ !

**ಚಾಂದ:**— ಸಾಧ್ಯವಿಲ್ಲ! ಯಾವ ಕೈಯಿಂದ ದೇವಾಧಿದೇವನಾದ ಮಹಾದೇವನ ಹಾಗು ಆದಿ ಶಕ್ತಿ ಚಂಡೀದೇವಿಯ ಪೂಜೆ ಮಾಡಿರುವೆನೋ ಆ ಕೈಯಿಂದ ಅಪದೇವತೆಯ ಪೂಜೆಯನ್ನೆಂದೂ ಮಾಡಲಾರೆನು! ಹೋಗು ವದರಲ್ಲಿರುವನು. ಶಿವನು ವೃದ್ಧ ಬ್ರಾಹ್ಮಣನ ವೇಷದಿಂದ ಪ್ರವೇಶಿಸುವನು)

**ಬ್ರಾಹ್ಮಣ:**— ರಾಜನೆ, ನೀನಾರ ಪೂಜೆ ಮಾಡುವೆ?

**ಚಾಂದ:**— ನೀನಾರು? ಇಲ್ಲಿಗೇಕೆ ಬಂದಿರುವೆ?

**ಬ್ರಾಹ್ಮಣ:**— ನಾನು ಯಾರೆ ಇರಲಿ, ನನ್ನ ಪ್ರಶ್ನೆಗೆ ಸರಿಯಾದ ಉತ್ತರ ಕೊಡು.

**ಚಾಂದ:**— ನಾನು ಶೈವನು. ಶಿವೋಪಾಸಕನು. ಏಕನಿಷ್ಠೆಯಿಂದ ಶಿವಪೂಜೆ ಮಾಡುತ್ತಿರುವೆನು.

**ಬ್ರಾಹ್ಮಣ:**— ಡಾಂಭಿಕ ಅರಸನೆ, ಬಹಿರಂಗದಲ್ಲಿ ನೀನು ಶಿವಪೂಜೆ ಯನ್ನು ಮಾಡುತ್ತಿದ್ದರೂ, ನಿಜವಾದ ಶಿವೋಪಾಸಕನಲ್ಲ! ಯಾಕೆಂದರೆ ನೀನು ಮಾಡುತ್ತಿರುವದು ಶಿವಪೂಜೆಯಲ್ಲ— ಅಹಂಕಾರದ ಪೂಜೆ!

**ಚಾಂದ:**— ಏನು, ನಾನು ಮಾಡುತ್ತಿರುವದು ಅಹಂಕಾರದ ಪೂಜೆಯೆ? ಅದು ಹೇಗೆ?

**ಬ್ರಾಹ್ಮಣ:**— ಪೂಜೆಯ ಸಮಯದಲ್ಲಿಯ ನಿನ್ನ ಭಾವನೆಗಳನ್ನು ವಿಚಾರಿಸಿಕೊಳ್ಳು. ಇದರಿಂದ ನಿನಗೆ ನನ್ನ ಮಾತಿನ ಸತ್ಯತೆಯು ಪಟಾಯಿಸುವದು. ನೀನು ಶಿವಪೂಜೆಯಲ್ಲಿ ತೊಡಗಿರುವಾಗ್ಗೆ, ನಾನೆಂತಹ ಗಟ್ಟಿಗನು, ಎಷ್ಟೋ ವಿಪತ್ತುಗಳೊದಗಿದರೂ ಮನಸಾದೇವಿಗೆ ಶಿರಬಾಗಿಸಲಿಲ್ಲ ಎಂದು ಆಲೋಚಿಸುತ್ತಿರುವೆಯಷ್ಟೆ! ಇದು ನಿನ್ನ ಅಹಂಕಾರದ ದ್ಯೋತಕವಲ್ಲವೆ? ನಿಜವಾದ ಭಕ್ತನು ಇಷ್ಟದೇವನ ಪೂಜೆಯ ಸಮಯದಲ್ಲಿ ಅನ್ಯ ಭಾವನೆಯನ್ನು ಹೊಂದನು. ಯಾಕೆಂದರೆ, ಪೂಜೆಯು ಅಹಂಕಾರದ ಸಾಮಗ್ರಿಯಲ್ಲ. ಪೂಜೆಯು ಪೂಜಾರಿಯು ಆತ್ಮನಿವೇದನವು. ಪೂಜೆಯು ಆತ್ಮನ ವಿನಯಪ್ರಕಟನೆಯು. ಈ ಆತ್ಮನಿವೇದನವು, ಈ ವಿನಯವು ನಿನ್ನ ಪೂಜೆಯಿಂದ ಎಂದೋ ಚ್ಯುತವಾಗಿ ದೂರ ಹೋಗಿಬಿಟ್ಟವೆ. ಗರ್ವದಿಂದ ನೀನು ಅಂಧನಾಗಿ ಹೋಗಿಬಿಟ್ಟಿರುವೆ. ಅಂತೆಯೆ

ನೀನು ಸಂಕುಚಿತ ವಿಚಾರಕ್ಕೊಳಗಾಗಿ ಮಹತೋಮಹೀಯನಾದ ಶಿವನನ್ನು ಸಂಕುಚಿತ ಆಕಾರಕ್ಕೆಳೆಯುತ್ತಿರುವೆ.

**ಚಾಂದ**— ನಾನು ದೇವಾಧಿದೇವನಾದ ಆ ಮಹಾದೇವನನ್ನು ಸಂಕುಚಿತ ಆಕಾರಕ್ಕೆಳೆಯುತ್ತಿರುವೆನೆ? ಸುಳ್ಳು! ನಾನು ಯಾರೆಂಬದನ್ನು ವಿಚಾರಿಸಿ ಎಚ್ಚರಿಕೆಯಿಂದ ಮಾತಾಡು.

**ಬ್ರಾಹ್ಮಣ**—ನಿಸ್ಪೃಹನಾದ ಬ್ರಾಹ್ಮಣನು ನಾನು. ನಿನ್ನ ರಾಜಶಾಸನವ ಭಯವು ನನಗಿಲ್ಲ ಅಂತೆಯೆ ಅಪ್ರಿಯವಾಗಿದ್ದರೂ ಪಥ್ಯದ ಮಾತನ್ನು ಹೇಳ ಬಯಿಸಿದ್ದೇನೆ. ಅಹಂಕಾರದಿಂದ ಅಂಧವಾದ ನಿನ್ನ ಕಣ್ಣುಗಳನ್ನು ತೆರೆಯುವ ಪ್ರಯತ್ನ ನಡಿಸಿದ್ದೇನೆ. ನೀನು ನಿನ್ನ ಈ ಅರಮನೆಯಲ್ಲಿ ಶಿವಮೂರ್ತಿಯನ್ನು ಪ್ರತಿಷ್ಠಿಸಿರುವೆಯಷ್ಟೆ? ಅದು ಅಸಂಪೂರ್ಣವಾಗಿಯೆ ಉಳಿದಿರುವದೇಕೆ?

**ಚಾಂದ**— ಅಸಂಪೂರ್ಣವಾಗಿದೆಯೆ? ಅಂದರೆ?

**ಬ್ರಾಹ್ಮಣ**— ಶಿವನ ಜಡೆಯಲ್ಲಿ ಸರ್ಪವಿರಬೇಡವೆ? ಶಿವನು ಸರ್ಪ ಭೂಷಣನಲ್ಲವೆ? (ಚಾಂದನು ಸುಮ್ಮನಿರುವನು) ದೇವದಾನವರು ಏಕತ್ರಿತರಾಗಿ ಅಮೃತ ಸಂಪಾದನೆಯ ಆಶೆಯಿಂದ ಇಂಗಡಲ ಕಡೆಯುವ ಕಾಲದಲ್ಲಿ ಅಮೃತದೊಡನೆ ಕಾಲಕೂಟವಿಷವೂ ಹೊರಟಿತು. ಮಹಾದೇವನು ಲೋಕ ಕಲ್ಯಾಣಾರ್ಥವಾಗಿ ಆ ಕಾಲಕೂಟ ವಿಷವನ್ನು ಭಕ್ಷಿಸಿ ನೀಲಕಂಠನಾದನು. ಶಿವನ ಭೂಷಣವಾಗಿದ್ದ ಸರ್ಪವು ಆ ಕಾಲಕೂಟ ವಿಷದ ಪ್ರತೀಕಸ್ವರೂಪವು. ನೀನು ಮನಸಾದೇವಿಯ ವಿರೋಧಕನು. ಈ ವಿರೋಧದ ಮೂಲಕವಾಗಿ ನೀನು ನಿನ್ನ ಇಷ್ಟ ದೇವನಾದ ಶಿವನನ್ನು ಸರ್ಪಾಲಂಕಾರದಿಂದ ವಂಚಿತನನ್ನಾಗಿ ಮಾಡಿದೆ! ಒಳ್ಳೆ ಬುದ್ಧಿವಂತನಾದ ಶಿವಭಕ್ತನು ನೀನು!

**ಚಾಂದ**— ಮಹನೀಯನೆ, ನೀನಾರು?

**ಬ್ರಾಹ್ಮಣ**— ನಾನು ಯಾರೆ? ಯಾರಾದರೇನು? ನೀನು ನಿನ್ನ ತಪ್ಪನ್ನು ತಿಳಿದೆಯಷ್ಟೆ? ಸುಧಾರಿಸಿಕೊಳ್ಳು! ದೇವಾಧಿದೇವನಾದ ಮಹಾದೇವನು ಅಣುವಿಗಿಂತ ಅಣುಸ್ವರೂಪನೂ ಮಹತೋಮಹೀಯನೂ ಆಗಿರುವನು. ಜಗತ್ತನ್ನೆಲ್ಲ ವ್ಯಾಪಿಸಿ ಹತ್ತುಬಟ್ಟು ಹೆಚ್ಚಾಗಿರುವನು. ಉಳಿದ ಎಲ್ಲ ದೇವತೆಗಳು ಈ ವಿರಾಟ್ ಸ್ವರೂಪನಾದ ಶಿವನ ಅಂಶಿಕ ರೂಪಾಂತರ ಸ್ವರೂಪರು. ಮನಸಾ

ದೇವಿಯು ಶಿವನ ಮಾನಸಪುತ್ರಿಯು. ಶಿವಭಕ್ತನಾದ ನೀನು ಶಿವಾತ್ಮಜೆಯೊಡನೆ ವಿರೋಧ ಬಳಿಸುವದು ಸಮಂಜಸವೆ? ಯಾವನು ಕ್ಷುದ್ರ ವಿಚಾರಗಳಿಂದ ದೇವತೆಗಳ ವಿಷಯದಲ್ಲಿ ಭೇದ ಭಾವನೆಯನ್ನಿಟ್ಟುಕೊಂಡು ಪೂಜೆ ಮಾಡುವನೊ ಅವನು ನಿಜವಾದ ಭಕ್ತನೆಂದೆನಿಸಿಕೊಳ್ಳಲಾರನು. ಇಂತಹನು ದೇವಪೂಜಕ ನಾಗಿರದೆ, ಮೂರ್ಖತೆಯ ಪೂಜಕನಾಗಿರುವನು. ಇವನ ಪೂಜೆಯು ಪೂಜೆಯಲ್ಲ-ವ್ಯಭಿಚಾರವು! ಮತ್ತೊಂದು ಮಾತೆಂದರೆ, ನದಿಗಳು ಕೊನೆಯಲ್ಲಿ ಸಮುದ್ರದಲ್ಲಿ ಸೇರಿಕೊಳ್ಳುವಂತೆ ಯಾವತ್ತು ದೇವತೆಗಳು ವಿರಾಟರೂಪನಾದ ಮಹಾದೇವನಲ್ಲಿ ಏಕತ್ರಿತರಾಗಿರುವರು. ಭಕ್ತನು ಅಭೇದ ಬುದ್ಧಿಯಿಂದ ಯಾವ ದೇವನನ್ನೆ ಪೂಜಿಸಲಿ, ಆ ಪೂಜೆಯು ಮಹಾದೇವನಿಗೆ ಅರ್ಪಿತವಾಗುವದು. ಇಂತಹ ಭಕ್ತನ ವಿಷಯದಲ್ಲಿ ಮಹಾದೇವನು ಸದಾ ಕೃಪಾಪೂರ್ಣನಾಗಿರುವನು.

(ಚಾಂದನು ಬ್ರಾಹ್ಮಣನ ಪಾದಗಳಮೇಲೆ ಬೀಳುವನು, ಬ್ರಾಹ್ಮಣನು ಅಂತರ್ಧಾನನಾಗುವನು. ಕೆಲಹೊತ್ತಿನ ಮೇಲೆ ಚಾಂದನು ಎದ್ದು ಕುಳಿತು ಅತ್ತಿತ್ತ ನೋಡುವನು)

**ಚಾಂದ**— ಜಗದೀಶನೆ, ಭಕ್ತವತ್ಸಲನೆ, ಕೃಪಾಸಾಗರನೆ, ನೀನು ವೃದ್ಧ ಬ್ರಾಹ್ಮಣನ ವೇಷದಲ್ಲಿ ಕಾಣಿಸಿಕೊಂಡು ನನ್ನ ಅಜ್ಞಾನವನ್ನು ಹೋಗಲಾಡಿಸ ಲಿಕ್ಕೆ ಯತ್ನಿಸಿದೆಯಲ್ಲವೆ? ಮಹಾದೇವನೆ, ಈಗ ನೀನೆಲ್ಲಿ? ಬಾ, ನಿಜರೂಪ ದಿಂದ ಈ ಪಾಮರನಿಗೆ ದರ್ಶನಕೊಡು ಇವನನ್ನುದ್ಧರಿಸು.

( ಶಿವನು ನಿಜರೂಪದಿಂದ ಪ್ರಕಟನಾಗುವನು. ಪಾವಸ್ರಾಂತದಲ್ಲಿ ಮನಸಾ ದೇವಿಯಿರುವಳು. )

**ಶಿವ**— ಚಾಂದ ಸವದಾಗರನೆ, ಇವಳು ನನ್ನ ಮಾನಸ ಸುತೆಯು. ಮನಸಾದೇವಿಯು ಭಕ್ತವತ್ಸಲೆಯು ಉದಾರಗುಣ ವಿಭೂಷಿತಳು. ನಿನ್ನ ಹಟವನು ನೋಡಿ ನಿನ್ನನ್ನು ದಾರಿಗೆ ತರುವದಕ್ಕಾಗಿ ಇವಳು ಏನೇ ಮಾಡಿರಲಿ, ಸ್ವಭಾವ ದಿಂದ ಕರುಣಾಮಯಿಯು. ಅಂತೆಯೆ ನಿನ್ನ ಸೊಸೆಯಾದ ಬೇಹುಳೆಯ ದುಃಖ ವನ್ನು ನೋಡಿ ಸಹಿಸದಾದಳು. ತನ್ನ ಹಟವನ್ನು ಬದಿಗಿರಿಸಿ, ಸತೀಶಿರೋಮಣಿ ಯಾದ ಬೇಹುಳೆಯ ದುಃಖಪರಿಹಾರಕ್ಕೆ ಮನಸ್ಸುಮಾಡಿದಳು. ಇವಳ ಉದಾರ

ಗುಣದಿಂದಲೆ ನಿನ್ನ ಮಗನು ಪುನರ್ಜೀವನವನ್ನು ಪಡೆದಿದ್ದಾನೆ. ನಿನ್ನ ಸೊಸೆಯು ಸೌಭಾಗ್ಯವತಿಯಾಗಿದ್ದಾಳೆ. ಈ ಉಪಕಾರಕ್ಕಾಗಿ ನೀನು ಮುನ್ನಿನ ಹಟವನ್ನು ಮರೆದು, ಕೃತಜ್ಞತಾಬುದ್ಧಿಯಿಂದ ಪ್ರೇರಿತನಾಗಿ ಮನಸಾದೇವಿಯ ಪೂಜೆ ಮಾಡ ಲಿಕ್ಕೆ ಬೇಕು.

**ಚಾಂದ:** ಯಾವ ಕೈಯಿಂದ ಜಗದಾಧಾರನಾದ ನಿನ್ನ ಪೂಜೆ ಮಾಡಿ ರುವೆನೊ, ಮಾಡುತ್ತಿರುವೆನೊ ಅದೇ ಕೈಯಿಂದ —

**ಶಿವ:** - ಮನಸಾದೇವಿಯ ಪೂಜೆ ಮಾಡಲಿಕ್ಕೆ ಏನೂ ಅಡ್ಡಿಯಿಲ್ಲ.

**ಸನಕೆ:—** ಪ್ರಾಣನಾಥರೆ, ಅನುಮಾನಿಸಬೇಡಿರಿ. ಮಾತೆಯಾದ ಮನ ಸಾದೇವಿಯು ತಾನೇ ತಾನಾಗಿ ನಮ್ಮ ಮನೆಗೆ ಬಂದಿದ್ದಾಳೆ. ಇವಳನ್ನು ಪೂಜೆ ಪ್ರನಸ್ಕಾರಗಳಿಂದ ಸಂತುಷ್ಟಗೊಳಿಸುವದು ಗೃಹಸ್ಥಾಶ್ರಮಿಗಳಾದ ನಮ್ಮ ಪರಮ ಧರ್ಮವು.

**ಬೇಹುಳೆ:—** ಮಾವಂದಿರೆ, ಇಲ್ಲಿ ಹೂಮಾಲೆಗಳಿವೆ. ಪೂಜೆಯ ಇತರ ಸಾಹಿತ್ಯಗಳಿವೆ ಮಹಾದೇವನನ್ನೂ, ಮನಸಾದೇವಿಯನ್ನೂ ಪೂಜಿಸಿ ಆಶೀ ರ್ವಾದ ಹೊಂದಿರಿ. (ಚಾಂದಸವದಾಗರನು ಹಾಗೆ ಮಾಡುವನು. ಎಲ್ಲರೂ ಸಾಷ್ಟಾಂಗ ನಮಸ್ಕಾರ ಮಾಡುವರು. ಮಹಾದೇವನ ಹಾಗು ಮನಸಾದೇವಿಯ ಜಯಜಯಕಾರ ಮಾಡುವರು.

ಸಮಾಪ್ತ

ಮುದ್ರಕರು — ಖಂ. ರಾ. ಭಿಸೆ ಕರ್ನಾಟಕ ಪ್ರಿಂ. ವರ್ಕ್ಸ್, ಧಾರವಾಡ.